# ಲೋಚನ

೧

ಸಂಪುಟ ೧
ಸಂಚಿಕೆ ೧

ಜೂನ್
೧೯೮೩




## ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

ವಾರ್ಷಿಕ ಚಂದಾ : ರೂ. ೩–೦೦    ಬಿಡಿ ಸಂಚಿಕೆ : ರೂ. ೪–೦೦

# ‘ಲೋಚನ’



## ಲೇಖನಗಳು–ಟಿಪ್ಪಣಿಗಳು

19–12–1982ರಂದು ನಡೆದ ಪ್ರತಿಷ್ಠಾನದ ಕಾರ್ಯಸಮಿತಿಯಲ್ಲಿ ಅಂಗೀಕೃತವಾದ ನಿರ್ಣಯ: “ಸಂಸ್ಥಾಪಕ ಕಾರ್ಯದರ್ಶಿಯವರ ಸೂಚನೆಯಂತೆ, ಬರುವ 1983ನೆಯ ವರ್ಷದಿಂದ ಸಂಶೋಧನಾತ್ಮಕ ಪಾಂಡಿತ್ಯಪೂರ್ಣ ಲೇಖನಗಳು ಹಾಗೂ ಹೊಸದಾಗಿ ಪ್ರಕಟವಾಗುವ ಉತ್ತಮ ಮಟ್ಟದ ಸಂಪಾದಿತ ಗ್ರಂಥಗಳು ಮತ್ತು ಶಾಸ್ತ್ರ ಸಾಹಿತ್ಯದ ಗ್ರಂಥಗಳು–ಇವುಗಳ ಮೇಲಣ ವಿಮರ್ಶೆಗಳು, ವಿದ್ವದ್ವಿಚಾರ ಮತ್ತು ವಿದ್ವತ್ ಪ್ರಪಂಚದ ವಿದ್ಯಮಾನ ಇವುಗಳಿಗೆ ಸಂಬಂಧಿಸಿದ ಟೀಕೆ ಟಿಪ್ಪಣಿಗಳು–ಇವುಗಳಿಗೆ ಮೀಸಲಾದ ವಿದ್ವತ್‌ಪತ್ರಿಕೆಯನ್ನು ವರ್ಷಕ್ಕೆ ಎರಡು ಸಲ (ಜೂನ್ ಮತ್ತು ಡಿಸೆಂಬರ್) ಪ್ರಕಟಿಸಬಹುದೆಂದೂ ಈ ಪತ್ರಿಕೆಗೆ “ಲೋಚನ” ಎಂಬ ಹೆಸರನ್ನು ಇಡಬಹುದೆಂದೂ ತೀರ್ಮಾನಿಸಲಾಯಿತು. ಪ್ರಾರಂಭದಲ್ಲಿ ಪತ್ರಿಕೆಯ ಗಾತ್ರ ಡೆಮಿ 1/8 ಆಕಾರದ 64 ಪುಟಗಳಷ್ಟು ಇರಬಹುದೆಂದು ಸೂಚಿಸಲಾಯಿತು.”

## ಲೇಖನಗಳಿಗೆ ಆಹ್ವಾನ

ಮೇಲ್ಕಂಡ ನಿರ್ಣಯದಲ್ಲಿ ವ್ಯಕ್ತಪಟ್ಟಿರುವ ಆಶಯಕ್ಕೆ ಅನುಗುಣವಾದ ಲೇಖನಗಳನ್ನು ವಿದ್ವಾಂಸರೂ ಭಾಷೆ ಸಾಹಿತ್ಯಗಳ ಪ್ರೌಢ ವಿದ್ಯಾರ್ಥಿಗಳೂ ಕಳಿಸಿಕೊಡಬೇಕೆಂದು ವಿನಂತಿ. ‘ಲೋಚನ’ದ ಗಾತ್ರ ಪರಿಮಿತವಾದದ್ದರಿಂದ ಲೇಖನಗಳು ಅಚ್ಚಿನ 6–8 ಪುಟಗಳ ಪರಿಮಿತಿಯಲ್ಲಿ ಇದ್ದರೆ ಅನುಕೂಲ. ಟಿಪ್ಪಣಿಗಳು 1–2 ಪುಟಗಳ ಪರಿಮಿತಿಯಲ್ಲಿರಬಹುದು. ಲೇಖನಗಳು ಹಾಳೆಯ ಒಂದೇ ಪಕ್ಕದಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಅಡಿಟಿಪ್ಪಣಿಗಳನ್ನು ಪುಟದ ಅಡಿಯಲ್ಲಿಯೇ ಕಾಣಿಸುವುದು ಒಳಿತು. ಗ್ರಂಥ–ಲೇಖನಾಧಾರ ವಿವರಗಳನ್ನು (Bibliography) ಲೇಖನದ ಕಡೆಯಲ್ಲಿ ಕೊಡಬಹುದು. ಯಾವುದೇ ಕಾರಣದಿಂದ ಲೇಖನವನ್ನು ಹಿಂದಿರುಗಿಸಲಾಗದ ಪ್ರಯುಕ್ತ ಲೇಖಕರು ತಮ್ಮ ಲೇಖನದ ಒಂದು ಪ್ರತಿಯನ್ನು ಉಳಿಸಿಕೊಂಡಿರಬೇಕಾಗಿ ಕೋರಿಕೆ.

## ವಿನಿಮಯ ಪತ್ರಿಕೆಗಳು

(ಪ್ರತಿಷ್ಠಾನದ ವಾರ್ತಾಪತ್ರಿಕೆಗೆಂದು ಬರುತ್ತಿದ್ದ ವಿನಿಮಯ ಪತ್ರಿಕೆಗಳನ್ನು “ಲೋಚನ”ಕ್ಕೆ ಸ್ವೀಕರಿಸಲಾಗಿದೆ.)

೧. ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ “ಸಾರ್ವಜನಿಕ” (ಇಂಗ್ಲಿಷ್), ೨. ಸೋವಿಯತ್ ದೇಶ, ೩. ಲಹರಿ (ಮದರಾಸು), ೪. ಅಂಕಣ, ಬೆಂಗಳೂರು.

ವಿಮರ್ಶೆಗಾಗಿ ಗ್ರಂಥಗಳ ಎರಡು ಪ್ರತಿಗಳನ್ನು ಲೇಖಕರು ಕಳಿಸಬೇಕು.

ಸೃಜನಾತ್ಮಕ ಗ್ರಂಥಗಳನ್ನು ಸಾಧಾರಣವಾಗಿ ವಿಮರ್ಶೆ ಮಾಡಲಾಗುವುದಿಲ್ಲ; ಆದರೆ, ಕಳಿಸಿದರೆ ‘ಸ್ವೀಕಾರ’ ಭಾಗದಲ್ಲಿ ಗಮನಿಸಲಾಗುವುದು; ವೈಶಿಷ್ಟ್ಯವುಳ್ಳ ಗ್ರಂಥಗಳನ್ನು ಸಾಧ್ಯವಾದರೆ ಅವಲೋಕನ ಮಾಡಿಸಲಾಗುವುದು.

# LOCHANA

(A Half-yearly Journal Published by B. M. Sri. Memorial Foundation, 54, 3rd Cross, Gavipuram Extension, Bangalore-19)

*Chief Editor :* Prof. G. Venkatasubbiah
*Executive Editor :* Prof. M. V. Seetha Ramiah
*Editor :* T. R. Mahadeviah

*Vol. 1.* *June 1983* *No. 1.*

## CONTENTS

# ಪರಿವಿಡಿ

# ಬಿ. ಎಂ. ಶ್ರೀ.

ಆಧುನಿಕ ಕನ್ನಡ ಕಾವ್ಯದ ಆಚಾರ್ಯ ಪುರುಷರಾದ ಬಿ.ಎಂ.ಶ್ರೀಯವರ ಜನ್ಮಶತಾಬ್ದಿಯನ್ನು ನಾಡೆಲ್ಲ ವಿಜೃಂಭಣೆಯಿಂದ ಆಚರಿಸಲಿದೆ. ಸುಪ್ತವಾಗಿದ್ದ ಕನ್ನಡದ ಕಾವ್ಯಶಕ್ತಿ, ಗುಪ್ತವಾಗಿದ್ದ ಹೊಸ ಕನ್ನಡದ ಕಾವ್ಯ, 'ಇಂಗ್ಲಿಷ್ ಗೀತಗಳು' ಪ್ರಸಿದ್ಧವಾದೊಡನೆ ಬಡಿದೆಬ್ಬಿಸಿದಂತೆ ಎಚ್ಚರಗೊಂಡವು. ನಾಡಿನ ಎಲ್ಲ ಮೂಲೆಗಳಿಂದ ಉದಯಗೀತ ಕೇಳಿ ಬಂದಿತು.

ಆಚಾರ್ಯ ಪುರುಷರಷ್ಟೇ ಅಲ್ಲ 'ಶ್ರೀ'ಯವರು; ಉದ್ದಾಮ ಕವಿಗಳ ಪಂಙ್ತಿಯಲ್ಲಿ ನಿಂತ ವ್ಯಕ್ತಿಯಾಗಿದ್ದರು. ಅವರ ಇಂಗ್ಲಿಷ್ ಗೀತಗಳ ಅನುವಾದಗಳಲ್ಲಿ ಬೇಂದ್ರೆಯವರು ಹೇಳಿದಂತೆ ಒಂದು ಅಮೃತಬಿಂದುವಿದೆ. ಅವರ 'ಅಶ್ವತ್ಥಾಮನ್' ಎಂಬ ರುದ್ರನಾಟಕ ಭಾಷಾಚಮತ್ಕೃತಿಯು ಒಂದು ಹೊಸ ಪರಂಪರೆಯನ್ನು ಸ್ಥಾಪಿಸಿ ತಲ್ಲದೆ ಒಂದು ಮಹೋನ್ನತ ಸಾಹಿತ್ಯಕೃತಿಯಾಗಿದೆ. ಅವರ 'ಶುಕ್ರಗೀತ' ಒಂದು ಧೀರೋದಾತ್ತ ಗೀತವಾಗಿದೆ. ಶ್ರೀಯವರ ವಿದ್ವತ್ತು-ಅಭಿರುಚಿಗಳು ಅವರ ಭಾಷಣ-ಲೇಖನಗಳಲ್ಲಿ ಅಭಿವ್ಯಕ್ತವಾಗಿವೆ.

ಕನ್ನಡ ಜನಜಾಗೃತಿ ಹಾಗು ಕನ್ನಡ ಸಾಹಿತ್ಯ ಪರಿಷತ್ತಿನ ಮುನ್ನಡೆಯಲ್ಲಿ ಅವರು ಸಲ್ಲಿಸಿದ ಸೇವೆ ಕನ್ನಡ ಜನದ ಮನೆಮಾತಾಗಿದೆ.

ಈ ಪೂಜ್ಯರ ಜನ್ಮಶತಾಬ್ದಿಯ ಆಚರಣೆಯೇ ಅವರ ಕೃತಿಗಳ ಅಮರತೆಯ ಕುರುಹಾಗಿದೆ.

ಬಿ. ಎಂ. ಶ್ರೀ. ಪ್ರತಿಷ್ಠಾನದವರು ಶ್ರೀಯವರ ಕೀರ್ತಿಯನ್ನು ಸಂಸ್ಥೀಕರಿಸಿದ್ದಾರೆ. ಅವರಿಗೆ ಜಯವಾಗಲಿ !

—ವಿ. ಕೃ. ಗೋಕಾಕ್

# 'ಲೋಚನ'ಕ್ಕೆ ಶುಭ ಸಂದೇಶಗಳು

"ಲೋಚನ" ಎಂಬುದು ಒಂದು ಷಾಣ್ಮಾಸಿಕ ವಿದ್ವತ್ಪತ್ರಿಕೆ ಆಗಲಿದೆ ಎಂದರೆ ವಿದ್ವಾಂಸರು ಚೆನ್ನಾಗಿ ಆಲೋಚಿಸಿ ಅವಲೋಕಿಸಿ ನಿರ್ಧರಿಸಿ ಎಚ್ಚರಿಕೆಯಿಂದ ನಿರೂಪಿಸುವ ಸಂಗತಿಗಳು ಮಾತ್ರ ಅದರಲ್ಲಿ ಪ್ರಕಟಗೊಳ್ಳತಕ್ಕದ್ದು. ಹಗುರವಾದ ಮನರಂಜನೆಗೆ ಸೀಮಿತವಾದ ಲಲಿತ ಬರೆಹಗಳಿಗೆ ಅದರಲ್ಲಿ ಸ್ಥಾನವಿರಬಾರದು. ಇದು ಹಿರಿಯ ಉದ್ದೇಶ, ಘನವಾದ ಉದ್ದೇಶ, ನಾಡಿನ ಸಂಸ್ಕೃತಿಯನ್ನು ಉಜ್ವಲಗೊಳಿಸಬಲ್ಲ ಧ್ಯೇಯ. ಆದ್ದರಿಂದ "ಲೋಚನ"ದಂಥ ಪತ್ರಿಕೆಗಳು ಮೇಲೆಮೇಲೆ ಹೊರಬರಬೇಕು. ಬೇಡ ಎನ್ನುವವರು ಬಹುಶಃ ಯಾರೂ ಇಲ್ಲ, ಯಾರೂ ಇರಬಾರದು.

**ಎಸ್. ವಿ. ರಂಗಣ್ಣ,**
ಮೈಸೂರು.

* * *

ಬಿ.ಎಂ.ಶ್ರೀ. ಪ್ರತಿಷ್ಠಾನವು "ಲೋಚನ" ಎಂಬ ಷಾಣ್ಮಾಸಿಕ ವಿದ್ವತ್ ಪತ್ರಿಕೆಯನ್ನು ಪ್ರಕಟಿಸುವ ನಿರ್ಧಾರದ ಬಗ್ಗೆ ತಿಳಿದು ಸಂತೋಷವಾಯಿತು. ಅದರಲ್ಲಿ ಪ್ರಕಟವಾಗಲಿರುವ ಲೇಖನಗಳು ಸಂಶೋಧನಾತ್ಮಕವಾಗಿರಬೇಕೆಂಬ ಸಂಪಾದಕ ಮಂಡಳಿಯ ಆಶಯವು ಸ್ವಾಗತಾರ್ಹ. ನಮ್ಮ ದೇಶದ ಉಳಿದ ಭಾಗಗಳನ್ನು ನೋಡಿದರೆ ಕರ್ನಾಟಕದಲ್ಲಿ ಇಂಥ ವಿದ್ವತ್ ಪತ್ರಿಕೆಗಳು ವಿರಳವೆಂದು ಹೇಳಬಹುದು. 'ಲೋಚನ' ಪತ್ರಿಕೆಯ ಮಟ್ಟವು ಸಾಕಷ್ಟು ವಿದ್ವತ್ಪೂರ್ಣವಾಗಿರುತ್ತದೆಂಬುದರಲ್ಲಿ ಸಂದೇಹವಿಲ್ಲ. ಈ ಪತ್ರಿಕೆಯು ಕನ್ನಡ ನಾಡು, ನುಡಿ, ಸಾಹಿತ್ಯ, ಸಂಸ್ಕೃತಿ ಮುಂತಾದವುಗಳ ಕುರಿತು ಮಹತ್ತರವಾದ ಲೇಖನಗಳನ್ನು ಪ್ರಕಟಿಸಿ ಎಲ್ಲ ವಿದ್ವಜ್ಜನರ ಮೆಚ್ಚುಗೆಯನ್ನು ಪಡೆಯಲೆಂದು ಹಾರೈಸುವೆನು.

**ಜಿ. ಎಸ್. ಗಾಯಿ,**
ನಿವೃತ್ತ ಪ್ರಧಾನ ಶಾಸನ ತಜ್ಞ,
ಭಾರತ ಸರ್ಕಾರ,
ಮೈಸೂರು.

* * *

ಬಿ. ಎಂ. ಶ್ರೀ. ಪ್ರತಿಷ್ಠಾನವು ಹೊರತರಲಿರುವ "ಲೋಚನ" ಷಾಣ್ಮಾಸಿಕ ವಿದ್ವತ್ ಪತ್ರಿಕೆಗೆ ನನ್ನಿಂದ ಶುಭ ಸಂದೇಶವನ್ನು ಬಯಸಿದ್ದೀರಿ. ನೀವು ಕೈಕೊಂಡಿರುವ ಕಾರ್ಯ ಅತ್ಯಗತ್ಯವಾದುದು. ಅಂಥ ಒಂದು ಕೆಲಸಕ್ಕೆ ಯಾರ ಶುಭ ಸಂದೇಶದ ಅಗತ್ಯವಿದೆ? ಅಂಥ ಕೆಲಸವನ್ನು ಕೈಕೊಳ್ಳುವುದೇ ಒಂದು ಸಾಹಸದ ಕಾರ್ಯವಾಗಿದೆ;

ಅದಕ್ಕೆ ಅದೇ ಹರಕೆ; ಶುಭ ಸಂದೇಶ. ಈಚೆಗೆ ಮೈಸೂರು ವಿಶ್ವವಿದ್ಯಾನಿಲಯದವರು ಪ್ರಕಟಿಸುತ್ತಿರುವ 'ಪ್ರಬುದ್ಧ ಕರ್ಣಾಟಕ' ಮತ್ತು ಕ. ಸಾ. ಪರಿಷತ್ತಿನ ಪತ್ರಿಕೆ ಇವೆರಡೂ ಬಡವಾಗುತ್ತ ಬಂದಿವೆ; ಬೆಂಗಳೂರು ವಿಶ್ವವಿದ್ಯಾಲಯದ 'ಸಾಧನೆ' ಉತ್ತಮಗೊಳ್ಳುತ್ತ ನಡೆದಿದೆ. ಅವು ಸಾಹಿತ್ಯ ಲೇಖನಗಳ ಜೊತೆಗೆ ವಿದ್ವದ್ ಲೇಖನಗಳಿಗೂ ಎಡೆಕೊಡುತ್ತಿವೆಯಾದರೂ ಕೇವಲ ವಿದ್ವದ್‌ಲೇಖನಗಳಿಗೇ ಮೀಸಲಾದುವಲ್ಲ. ತಾವು ಹೊರತರಲಿರುವ "ಲೋಚನ" ವಿಶಿಷ್ಟವಾಗಿ ವಿದ್ವದ್ ಲೇಖನಗಳಿಗೇ ಮೀಸಲಾದುದಾಗಿ ಕನ್ನಡದ ವಿದ್ವತ್ ಪ್ರಪಂಚದಲ್ಲಿ ಪ್ರಕಾಶಗೊಳ್ಳಲಿದೆ. ತನ್ನ ಉದ್ದೇಶಕ್ಕೆ ಸಫಲತೆ ದೊರಕಿಸಿಕೊಂಡು ಒಂದು ಹೊಸ ಆಯಾಮವನ್ನು ನಿಮ್ಮ ಈ ಪತ್ರಿಕೆ ತೆರೆಯುವಂತಾಗಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ. ನಿಮ್ಮ ಕಾರ್ಯ ಯಶಸ್ವಿಯಾಗಲಿ.

ವಿ. ಸೀತಾರಾಮಯ್ಯ,
ಬೆಂಗಳೂರು.

* * *

ಪೂಜ್ಯ ದಿ|| ಬಿ. ಎಂ. ಶ್ರೀ. ಅವರ ಹೆಸರಿನಲ್ಲಿ ಪ್ರತಿಷ್ಠಾಪಿತವಾಗಿರುವ ಪ್ರತಿಷ್ಠಾನದ ವತಿಯಿಂದ ಒಂದು ಷಾಣ್ಮಾಸಿಕ ವಿದ್ವತ್ ಪತ್ರಿಕೆ "ಲೋಚನ"ವನ್ನು ಪ್ರಕಟಿಸುವುದಾಗಿ ತಿಳಿದು ತುಂಬ ಹರ್ಷವಾಯಿತು. ಕನ್ನಡದಲ್ಲಿ ವಿದ್ವತ್ ಪತ್ರಿಕೆಗಳು ತುಂಬ ವಿರಳ. ಆದರೆ ಇಂಥ ಪತ್ರಿಕೆಗಳಿಂದ ಮಾತ್ರ ಕನ್ನಡಕ್ಕೆ ದೊಡ್ಡಸ್ತಿಕೆ ದೊರೆಯುತ್ತದೆ.

ಪು. ತಿ. ನರಸಿಂಹಾಚಾರ್,
ಬೆಂಗಳೂರು.

* * *

ಘನವಾದ ಉದ್ದೇಶವನ್ನಿಟ್ಟುಕೊಂಡು ಹುಟ್ಟಿಬರುತ್ತಿರುವ "ಲೋಚನ"ಕ್ಕೆ ಸುಸ್ವಾಗತವನ್ನೂ ದೀರ್ಘಾಯುರಾರೋಗ್ಯಗಳನ್ನೂ ಬಯಸುತ್ತೇನೆ. ವಿದ್ವಲ್ಲೋಕಕ್ಕೆ ಇದು ಯಥಾರ್ಥವಾಗಿ 'ಲೋಚನ'ವೇ ಆಗಲಿ ಎಂದು ಕನ್ನಡದ ದೈವವನ್ನು ಪ್ರಾರ್ಥಿಸುತ್ತೇನೆ.

ಸೇಡಿಯಾಪು ಕೃಷ್ಣಭಟ್ಟ,
ಮಣಿಪಾಲ.

* * *

"ಲೋಚನ" ಪತ್ರಿಕೆ ಯಶಸ್ವಿಯಾಗಿ ನಡೆಯಲೆಂದು ಹಾರೈಸುತ್ತೇನೆ.

ಎ. ಎನ್. ಮೂರ್ತಿರಾವ್,
ಮೈಸೂರು.

*　　*　　*

ಪ್ರತಿಷ್ಠಾನ "ಲೋಚನ" ಎಂಬ ಅರ್ಧವಾರ್ಷಿಕೆಯನ್ನು ಪ್ರಕಟಿಸುವ ವಿಚಾರ ತಿಳಿದು ಸಂತೋಷವಾಯಿತು. ಕನ್ನಡದಲ್ಲಿರುವ ಕೇವಲ ಬೆರಳೆಣಿಕೆಯ ಸಂಶೋಧನಾತ್ಮಕ ನಿಯತಕಾಲಿಕೆಗಳಲ್ಲಿ ಇದು ಗಣ್ಯವಾದ ಸ್ಥಾನ ಪಡೆಯುತ್ತದೆಂದು ಆಶಿಸಿದ್ದೇನೆ.

ಹಾ. ಮಾ. ನಾಯಕ,
ಮೈಸೂರು.

*　　*　　*

ಪ್ರತಿಷ್ಠಾನವು ಸಂಶೋಧನಾತ್ಮಕ ಲೇಖನಗಳನ್ನೊಳಗೊಂಡ "ಲೋಚನ" ಎಂಬ ಪತ್ರಿಕೆಯನ್ನು ಪ್ರಕಟಿಸುತ್ತಿರುವುದು ಅತ್ಯಂತ ಸಂತೋಷದ ಸಂಗತಿಯಾಗಿದೆ. ಇಂಥದೊಂದು ಸಾಹಸ ಜ್ಯೋತಿಶ್ಶರೀರಿಯೂ ವಾಙ್ಮಯಶರೀರಿಯೂ ಆದ 'ಶ್ರೀ' ಅವರಿಗೆ ಮೆಚ್ಚುಗೆಯಾಗುತ್ತದೆಂಬುದನ್ನು ನಾನು ಬಲ್ಲೆ. "ಲೋಚನ" ಸಾಹಿತಿಗಳ, ವಿದ್ವಾಂಸರ ಹಾಗೂ ಸಂಶೋಧಕರ ಲೋಚನವಾಗಲಿ, ಸದಾ ಶ್ರೀಯುಕ್ತವಾಗಿರಲಿ ಎಂದು ಹಾರೈಸುತ್ತೇನೆ.

ದೇ. ಜವರೇಗೌಡ,
ಮೈಸೂರು

*　　*　　*

ಪ್ರತಿಷ್ಠಾನವು "ಲೋಚನ" ಎಂಬ ಷಾಣ್ಮಾಸಿಕ ಪತ್ರಿಕೆಯನ್ನು ಪ್ರಕಟಿಸಲಿರುವುದು ತಿಳಿದು ಸಂತೋಷವಾಯಿತು. ಹಸ್ತಲಿಖಿತ ಸಂಗ್ರಹ, ಸಂಶೋಧನೆ, ವಿಚಾರ ಸಂಕಿರಣಗಳ ಯೋಜನೆ, ಗ್ರಂಥ ಪ್ರಕಾಶನ—ಹೀಗೆ ಅನೇಕ ಕಾರ್ಯಗಳನ್ನು ಹಬ್ಬಿಕೊಂಡ ನಿಮ್ಮ ಸಂಸ್ಥೆ ಸಂಶೋಧನಾತ್ಮಕ ಪ್ರಬಂಧಗಳ ಪ್ರಕಟನೆಗೆ ತನ್ನದೇ ಆದ ಒಂದು ಪತ್ರಿಕೆಯನ್ನು ಪಡೆದಿರುವುದು ಅಗತ್ಯವಾಗಿದೆ. ಈ ದೃಷ್ಟಿಯಿಂದ "ಲೋಚನ"ದ ಪ್ರಕಟನೆಯ ಉಪಕ್ರಮ ಸ್ತುತ್ಯವಾಗಿದೆ. ನಿಮ್ಮ ಉತ್ತಮ ಮಾರ್ಗದರ್ಶನದಲ್ಲಿ ಈ ಪತ್ರಿಕೆ ಕಾಲಕ್ರಮದಲ್ಲಿ ತ್ರೈಮಾಸಿಕ ಅಥವಾ ದ್ವೈಮಾಸಿಕವಾಗಿ ಸಂಶೋಧನ ಲೇಖನಗಳ ಉತ್ತಮ ಮಟ್ಟವನ್ನು ಕಾಯ್ದುಕೊಂಡು ಹೋಗಲಿ ಎಂದು ಆಶಿಸುವೆನು.

ಕೆ. ಟಿ. ಪಾಂಡುರಂಗಿ,
ಬೆಂಗಳೂರು.

---

# ಲೋಚನ

ಸಂಪುಟ ೧ | ಜೂನ್ ೧೯೮೩ | ಸಂಚಿಕೆ ೧

## ಭಾನುವಿನ ಬೆಳಕು

೧

ಬೆಳಗಾಗಲೆದ್ದೆ ನಾನೀಗ ಜಾಗ್ರದಲಿ ।
ಮಲಗಿದ್ದು ನಿದ್ರೆ ತಿಳಿವನಕ ರಾತ್ರಿಯಲಿ ॥ ಪ ॥

ಬ್ರಹ್ಮ ತಾನೆಂದೆಂಬ ಭಾನು ಬಳಿಕಸ್ತಮಿಸಿ
ಹಮ್ಮೆಂಬ ಸಂಜೆಗತ್ತಲೆಯಡರಲು ।
ಉಮ್ಮಳಿಪ ವಿಷಯ ರೂಪದ ಮಾಯೆ ನಡುವಿರುಳು
ಜುಮ್ಮೆನುತ ಮೈಮರೆದವಿದ್ಯೆಯಲಿ ಮುಳುಗಿ ॥ ೧ ॥

ಕೃಷ್ಣ ಪಕ್ಷದ ಕಡೆಯ ದಿವಸ ನಡುರಾತ್ರಿಯಲಿ
ದಟ್ಟವಿಪ ಮೇಘಮಂಡಲದ ತೆರದಿ ।
ಇಟ್ಟೆಡೆಯ ಕಾಮದಲಿ ಮನ ಮುಳುಗಿ ಮತ್ತಲ್ಲಿ
ಮುಟ್ಟೆ ಕರ್ಮವ ಮಾಡಲದು ಕಣ್ಣಮುಚ್ಚಿರಲು ॥ ೨ ॥

ಸತ್ಯ ಜಗವೆಂದೆಂಬ ವರುಷರುತು ದಾಟಿದುದು
ನಿತ್ಯವಲ್ಲದ ಮಾಯೆ ನಿಶಿ ತೆಗೆದುದು ।
ಪ್ರತ್ಯಗಾತ್ಮಜ್ಯೋತಿ ಸೂರ್ಯ ತಾನುದಿಸಿದನು
ಮುತ್ತೆರದಹಂಕಾರ ನಿದ್ರೆ ಲಯವಾಯಿತು ॥ ೩ ॥

ಗುರುವಿನಂಘ್ರಿಗೆ ನಮಿಸಿದರುಣ ತಾನುದಿಸುತಿರೆ
ಗುರುತರದ ಮೋಹಾಂಧಕಾರ ಬಳಿಕ ।
ಹರಿದು ಬೆಳಕಾವರಿಸಿ ಗುರುವಿನುಪದೇಶದಲಿ
ಸ್ಫುರಿಸಿ ಸರ್ವತ್ರತಾ ನಿಬಿಡವಾಗಿರಲು ॥ ೪ ॥

ತಿರುಪತಿಯ ವೆಂಕಟನ ಚರಣಕಮಲವನೊಮ್ಮೆ
ಕರಣದೊಳಗಪ್ಪಿ ಕನಸಿನ ಕಡೆಯಲಿ ।
ಹರಿದುಹೋಯಿತು ಕನಸು ಸ್ಥಿರಕೆ ನಿಂತಿತು ನಿಜವು
ಮರಳಿ ಕನಸನು ಕಾಣದಂತಾಯಿತೀಗ ॥ ೫ ॥

೨

ಬೆಳಗುತಿದೆ ಬೆಳಗುತಿದೆ ಭಾನುವಿನ ಬೆಳಕು ।
ಥಳಥಳಿಸಿ ಸರ್ವವನು ತೇಜಿಸುವ ಬೆಳಕು ॥ ಪ ॥

ಅಮಿತಾಂಡಕೋಟಿಗಳನಾಳ ಬೆಳಗುವ ಬೆಳಕು
ತಿಮಿರತಂಡಗಳನ್ನು ತೆಗೆದಿಡುವ ಬೆಳಕು ।
ಸುಮನಸರೂಪಾಗಿ ಶೋಭಿಸುತ್ತಿಹ ಬೆಳಕು
ವಿಮಲವಾಗಿಯೆ ತಾನು ವೊಲಿದಿರುವ ಬೆಳಕು ॥ ೧ ॥

ಮನೆಮನೆಗಳಭಿಮುಖದಿ ಮೂಡಿ ನಿಂದಿಹ ಬೆಳಕು
ಮುನಿಮನೋಜ್ಞತೆಯಾದ ಮುಖ್ಯತಮ ಬೆಳಕು ।
ಸನಕಾದಿಗಳು ತಾವೆ ಸಂಪಾದಿಸಿದ ಬೆಳಕು
ಕೊನೆ ಮೊದಲ ನೋಡಿದರೆ ಕಾಣದಿಹ ಬೆಳಕು ॥ ೨ ॥

ಹಲವು ಕ್ರಿಯೆ ಸೂತ್ರಗಳ ಹಿಡಿದಾಡಿಸುವ ಬೆಳಕು
ಜಲಜದಂದದಿ ಕರ್ಮಜಡರಹಿತ ಬೆಳಕು ।
ನಿಲುಕದೆ ಗಗನದಲಿ ನಿಂದವೋಲಿಹ ಬೆಳಕು
ಚಲನವನು ಚಕ್ಷುವಿಗೆ ಜೋಡಿಸಿದ ಬೆಳಕು ॥ ೩ ॥

ಕಾರಣವು ತಾನಾಗಿ ಕಾರ್‍ಯವೆನಿಸಿಹ ಬೆಳಕು
ಮಿೀರದೆ ಜೀವರನು ಮಿಕ್ಕಿರುವ ಬೆಳಕು ।
ಮೂರುಲೋಕಕೆ ಭರ್ತೃ ಮುಕ್ತಿಸುಖವಹ ಬೆಳಕು
ಪಾರಮಾರ್ಥಿಕವಹ ಪರಬ್ರಹ್ಮ ಬೆಳಕು ॥ ೪ ॥

ಪರಮ ಪಾವನವಾಗಿ ಪಾಪವಳಿಯುವ ಬೆಳಕು
ಶರಣಾಗತರ ಕಾಯ್ವ ಸುಲಭ ಸುಖ ಬೆಳಕು ।
ತಿರುಪತಿಯ ವಾಸವನು ತಾಳಿಕೊಂಡಿಹ ಬೆಳಕು ।
ವರದ ವೆಂಕಟರಮಣ ನಾಮರವಿ ಬೆಳಕು ॥ ೫ ॥*

---

* ಪ್ರತಿಷ್ಠಾನದ ಹಸ್ತಪ್ರತಿ ಭಂಡಾರದಲ್ಲಿರುವ, ತಿಮ್ಮಪ್ಪದಾಸರ ಕೀರ್ತನೆಗಳನ್ನು ಒಳಗೊಂಡ ಕಾಗದದ ಹಸ್ತಪ್ರತಿಯಿಂದ ಆಯ್ದ ಅಪ್ರಕಟಿತ ರಚನೆಗಳು.

# ಗೋವಿಂದ ಪೈಯವರ ವ್ಯಕ್ತಿತ್ವ ಮತ್ತು ಸಾಧನೆ*

—ಪ್ರೊ॥ ಎಂ. ರಾಜಗೋಪಾಲಾಚಾರ್ಯ

ಗೋವಿಂದ ಪೈಗಳು ಹುಟ್ಟಿ 23-3-1983ನೇ ತಾರೀಕಿಗೆ ಒಂದು ಶತಮಾನವಾಯಿತು. ಅವರು 80 ವರ್ಷಗಳ ತುಂಬು ಬಾಳನ್ನು ಬಾಳಿದರು. (ನಿಧನ 6-8-1963). ಈ ಸುದೀರ್ಘವಾದ ಬದುಕಿನಲ್ಲಿ ಅವರು ಮನುಷ್ಯರಾಗಿ ಬದುಕಿದರು. ಮಾನಸಿಕವಾಗಿ ಬಹಳ ಎತ್ತರಕ್ಕೆ ಏರಿದ್ದರು. ಅವರದೇ ಆದ ಅಪೂರ್ವ ವ್ಯಕ್ತಿತ್ವವಿದ್ದಿತ್ತು ಅವರಿಗೆ. ಆ ಕಾಲದಲ್ಲಿ ಅವರ ಕುಟುಂಬದವರ ಅಥವಾ ಮನೆತನದವರ ವೃತ್ತಿ ಹೆಚ್ಚಾಗಿ ವಾಣಿಜ್ಯ. ಅವರಲ್ಲಿ ಬಹುಮಂದಿ ಇಂದಿಗೂ ದೊಡ್ಡ ವ್ಯಾಪಾರ ಕ್ಷೇತ್ರದಲ್ಲಿ ಹೆಸರಾಂತವರು. ಪೈಯವರು ವ್ಯಾಪಾರಕ್ಕಿಳಿಯಲೂ ಇಲ್ಲ, ಹಣಕಾಸು ಮಾಡಲೂ ಇಲ್ಲ. ಜನ್ಮತಃ ಅವರು ಅಧ್ಯಯನಶೀಲರು. ಮಾಲನ್ನು ವಿಕ್ರಯಿಸಿ ಹಣ ಸಂಪಾದಿಸುವ ಬದಲಿಗೆ, ಇದ್ದ ಹಣವನ್ನೇ ತೆತ್ತು ಗ್ರಂಥಗಳನ್ನು ಕೊಂಡರು; ಬೃಹದಾಕಾರದ ಪುಸ್ತಕಾಲಯವನ್ನು ನಿರ್ಮಿಸಿಕೊಂಡರು. ಈಗ ಅಲಭ್ಯವಾಗಿರುವ ಎಷ್ಟೋ ಅಮೂಲ್ಯ ಗ್ರಂಥಗಳು ಇವರ ಸಂಗ್ರಹದಲ್ಲಿವೆ ಎಂದರೆ ಯಾರಿಗೂ ಅಚ್ಚರಿಯೆನಿಸಬಹುದು. 30ಕ್ಕೂ ಹೆಚ್ಚಿನ ಭಾಷೆಗಳಲ್ಲಿ ಇವರಿಗೆ ಪರಿಶ್ರಮವಿದ್ದಿತು.‡ ಆಯೆಲ್ಲ ಭಾಷೆಗಳ ಗ್ರಂಥಗಳೂ ಇವರ ಸಂಗ್ರಹದಲ್ಲಿ ಈಗಲೂ ಇವೆ. ಪ್ರತಿಯೊಂದು ಗ್ರಂಥವನ್ನು ಆಮೂಲಾಗ್ರವಾಗಿ ನೋಡಿ ಅಲ್ಲಲ್ಲಿ ಅಡಿಟಿಪ್ಪಣಿಗಳನ್ನು ಮಾಡಿದ್ದರು.

ಕನ್ನಡ ಸಾಹಿತ್ಯದ ಹೊಸ ತಲೆಮಾರಿನಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಹಳ ದೊಡ್ಡ ಕೆಲಸ ಮಾಡಿದ ವ್ಯಕ್ತಿ ಗೋವಿಂದ ಪೈಯವರು. ಕಾವ್ಯ, ನಾಟಕ, ಗದ್ಯ, ಸಂಶೋಧನ ಮುಂತಾದ ಸಾಹಿತ್ಯದ ಅನೇಕ ಪ್ರಕಾರಗಳಿಗೆ ಹೊಸ ತಿರುವು ಕೊಟ್ಟ ಮೊದಲ ವಿದ್ವಾಂಸ. ಆದರೆ ಈಗಿನ ತಲೆಮಾರಿನ ಕವಿಗಳಿಗೆ ಇದ್ದ ಪ್ರಸಿದ್ಧಿ ಅವರಿಗೆ

---

* 27-3-1983ರಂದು ಪ್ರತಿಷ್ಠಾನ ಏರ್ಪಡಿಸಿದ್ದ ಗೋವಿಂದ ಪೈ ಜನ್ಮಶತಮಾನೋತ್ಸವದ ಸಂದರ್ಭದಲ್ಲಿ ಮಾಡಿದ ಉಪನ್ಯಾಸ.

‡ 1. ಅರೆಬಿಕ್, 2. ಅಸ್ಸಿರಿಯನ್, 3. ಅವೆಸ್ತ ಮತ್ತು ತಾಲವಿ, 4. ಬಂಗಾಳಿ, 5. ಬರ್ಮೀಸ್, 6. ಚೈನೀಸ್, 7. ಕುರ್ಗೀಸ್, 8. ಇಂಗ್ಲಿಷ್, 9. ಫ್ರೆಂಚ್, 10. ಗಲ್ಲ್ಯ, 11. ಜರ್ಮನ್, 12. ಗೋವಾನಿಕ್, ಕೊಂಕಣ್, 13. ಗ್ರೀಕ್, 14. ಗುಜರಾತಿ, 15. ಹಿಬ್ರೂ, 16. ಹಿಂದಿ, 17. ಇರಾನಿಯನ್, 18. ಇಟಾಲಿಯನ್, 19. ಜಪಾನೀಸ್, 20. ಕನ್ನಡ, 21. ಕೋಂಡ, 22. ಲೇಟಿನ್, 23. ಮಲಯಾಳಿ, 24. ಮರಾಠಿ, 25. ಒರಿಯ, 26. ಪಾಲಿದಿ ಮತ್ತು ಎಲ್ಫೊಂಡ, 27. ಪಾಳಿ, 28. ಪರ್ಷಿಯನ್, 29. ಪೋರ್ಚುಗೀಸ್, 30 ರಶಿಯನ್, 31. ಸಂಸ್ಕೃತ, 32. ಸ್ಪಾನಿಷ್, 33. ತಮಿಳು, 34. ತೆಲುಗು, 35. ಟಿಬೆಟಿಯನ್, 36. ಉರ್ದು, 37. ತುಳು.

ದೊರಕಲಿಲ್ಲ. ಕಾರಣವೇನೆಂದರೆ ಅವರು ಪಂಡಿತ ಕವಿ. ಸಂಸ್ಕೃತದಲ್ಲಿ ಕವಿ ಎಂಬುದು ಪಂಡಿತದ ಪರ್ಯಾಯಪದ. ಆ ಅರ್ಥದಲ್ಲಿ ಮಾತ್ರ ಅವರು ಕವಿಯಾಗಿದ್ದ ರೆನ್ನಬಹುದು. ಅವರ ಕಾವ್ಯವಾಗಲಿ, ಇತರ ಬರವಣಿಗೆಯಾಗಲಿ ಸ್ವಲ್ಪಮಟ್ಟಿಗೆ ಪೆಡಸೇ ಆಗಿತ್ತು. ಆದರೆ ಅವರ ಮನಸ್ಸು ಮಾತ್ರ ತೀರ ಕೋಮಲವೂ ಆರ್ದ್ರವೂ ಆಗಿತ್ತು. ಇವರ ಯಾವುದೇ ಬಗೆಯ ಬರೆವಣಿಗೆಯಲ್ಲಿ ನಾಜೂಕಿಗಿಂತ ಗಟ್ಟಿತನ ಹೆಚ್ಚು. ಒಂದು ವಿಷಯದ ಮೇಲೆ ಜಿಜ್ಞಾಸೆ ಹುಟ್ಟಿತೆಂದರೆ ಅದನ್ನು ಆಮೂಲ ಚೂಲವಾಗಿ ನೋಡಿ ವಿಮರ್ಶಿಸದೆ, ಅವರಿಗೆ ನೆಮ್ಮದಿಯಾಗುತ್ತಿರಲಿಲ್ಲ. ಕಂಡ ಕಂಡವರ ಬಳಿ ಕೇಳಿ, ಗೊತ್ತಿದ್ದವರಿಗೆ ಪತ್ರ ಬರೆದು ವಿಷಯವನ್ನು ಸಂಗ್ರಹಿಸಿ ನಿರ್ಣಯಕ್ಕೆ ಬರುವುದು ಅವರಿಗೆ ಸ್ವಭಾವವಾಗಿತ್ತು. ಇವತ್ತಿಗೆ ಅವರ ಸಂಶೋಧನೆ ಗಳಲ್ಲಿ ಕೆಲವು ಅಪೂರ್ಣತೆಗಳೂ ದೋಷಗಳೂ ಕಾಣಿಸಬಹುದು. ಆದರೆ ಅದರಿಂದ ಆದ ಪ್ರಯೋಜನ ಒಂದೆರಡಲ್ಲ. ಅವರ ಆಡು ಹೋದ ದಾರಿಯಲ್ಲೇ ಇಂದು ನಮ್ಮ ಆನೆ ಹೋಗುತ್ತಾ ಇದೆ ಎಂಬುದನ್ನು ನಾವು ಅಲ್ಲಗಳೆಯುವಂತಿಲ್ಲ.

ಪೈಯವರದು ಮುಗ್ಧವಾದ ಮನಸ್ಸು, ಪ್ರಾಮಾಣಿಕ ವ್ಯಕ್ತಿ ಅವರು. ಆದ್ದರಿಂದಲೇ ಸಾಚಾವ್ಯಕ್ತಿಗಳಲ್ಲಿರುವ ಅಭಿಮಾನ ಅವರಿಗೆ ಬರಿಯ ಮೇಧಾವಿಗಳಲ್ಲಿರ ಲಿಲ್ಲ. ಯಾರಾದರೂ ಕುಚೋದ್ಯಕ್ಕಾಗಿ ಅಡ್ಡಪ್ರಶ್ನೆಗಳನ್ನೆಸೆದರೆ, ಅದನ್ನು ಸಮರ್ಪಕ ವಾಗಿ, ಸಾಧಾರವಾಗಿ ಉತ್ತರಿಸಲು ಪ್ರಯತ್ನಿಸುತ್ತಿದ್ದರು. ಆಗ ಅವರ ಕಳಕಳಿಯನ್ನು ಕಂಡು ಬೇಸತ್ತವರೂ ಉಂಟು. ಇಷ್ಟು ದೊಡ್ಡವ್ಯಕ್ತಿಯಾಗಿದ್ದರೂ, ಅವರು ತಮ್ಮನ್ನು ತಾವು ದೊಡ್ಡವರೆಂದು ತಿಳಿದುಕೊಂಡವರೂ ಅಲ್ಲ, ಹಾಗೆ ಹೇಳಿಕೊಂಡ ವರು ಅಲ್ಲವೇ ಅಲ್ಲ. ಗೋವಿಂದ ಪೈಯವರು ಎಷ್ಟು ಘನ ವಿದ್ವಾಂಸರು ? ಎಂಬುದ- ಕ್ಕಿಂತ ಅವರ ವಿದ್ಯೆ ಅವರಿಗೆ ಎಂತಹ ವಿನಯವನ್ನು ತಂದುಕೊಟ್ಟಿದೆ ಎಂದು ತಿಳಿದರೆ ಯಾವ ವಿದ್ವಾಂಸನೂ ಅವರಿಗೆ ತಲೆಬಾಗಲೇಬೇಕು. ಉಪನಿಷತ್ತಿನಲ್ಲಿ 'ಅವಿಜ್ಞಾತಂ ವಿಜಾನತಾಂ, ವಿಜ್ಞಾತಮವಿಜಾನತಾಂ' ಎಂಬ ಮಾತು ಬರುತ್ತದೆ. ತಿಳಿದವರಿಗೆ ಏನೂ ಗೊತ್ತಿಲ್ಲ, ತಿಳಿಯದವರಿಗೆ ಮಾತ್ರ ಸ್ವಲ್ಪ ಗೊತ್ತಿರುವುದು ಎಂದು ಇದರ ಅರ್ಥ. ಈ ಎರಡನೇ ಗುಂಪಿಗೆ ಸೇರಿದವರು ಪೈಗಳು. ಅವರ 80ನೇ ವರ್ಷದಲ್ಲಿ, ಅಂದರೆ 1963ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಅವರಿಗೆ ಗೌರವ ಡಾಕ್ಟರೇಟ್ ಪದವಿ ಯನ್ನು ಕೊಡುವುದೆಂದು ನಿರ್ಣಯಿಸಿತು. ಅವರು ಅದನ್ನು ನಿರಾಕರಿಸಿದರು. ಅವರಿಗೆ ಪ್ರಾಪಂಚಿಕವಾದ ಯಾವ ತೋರಿಕೆಯ ಗೌರವದ ಮೇಲಾಗಲಿ, ವಿಷಯಗಳ ಮೇಲಾಗಲಿ ಅಭಿಲಾಷೆಯಿದ್ದಿರಲಿಲ್ಲ. ಆದರೆ ಮಾನವೀಯತೆಯ ಮೇಲೆ ಅವರಿಗೆ ತುಂಬ ಅಭಿಮಾನವಿದ್ದಿತು. ಮನೆಗೆ ಬಂದವರನ್ನು ಆದರದಿಂದ ಕಂಡು ಉಪಚರಿಸಿ, ಅವರನ್ನು ಮನೆಯ ಬಾಗಿಲಿನ ಗೇಟಿನವರೆಗೂ ಬೀಳ್ಕೊಡುತ್ತಿದ್ದರು. ಇಂತಹ ಋಷಿಸದೃಶನಾದ ಮತ್ತೊಬ್ಬ ವ್ಯಕ್ತಿ ಆ ಕಾಲದಲ್ಲಿದ್ದಿರಲಿಲ್ಲವೆಂದರೆ ಸತ್ಯದೂರದ ಮಾತಾಗದು.

ಅವರ ಮಂಜೇಶ್ವರದ ಮನೆಯೇ ಒಂದು ಆಶ್ರಮದಂತಿತ್ತು. ಮನೆಯ ಸನಿಹದಲ್ಲೇ ಭೋರ್ಗರೆವ ಕಡಲು. ತಮ್ಮ 44ನೇ ವಯಸ್ಸಿನಲ್ಲಿ (1927ರಲ್ಲಿ) ತಮ್ಮ ಸಹಧರ್ಮಿಣಿ ಕೃಷ್ಣಾಬಾಯಿಯನ್ನು ಕಳೆದುಕೊಂಡರು. ಆ ಬಳಿಕ ಅವರು ತೀರ ಏಕಾಕಿ ವಾನಪ್ರಸ್ಥದವರಂತೆ ತಮ್ಮ ಮನೆಯಲ್ಲಿ ಸದಾ ಚಿಂತನಾಸಕ್ತರಾಗಿ ಉಳಿದರು. ಅಂತೆಯೇ ಅವರು ಅಂತರ್ಮುಖಿಗಳಾಗುತ್ತಾ ಬಂದರು. ಅವರ ಹೆಚ್ಚಿನ ಕವಿತೆಗಳಲ್ಲಿ ಮಾನವೀಯತೆ, ರಾಷ್ಟ್ರಪ್ರೇಮ, ದೈವಭಕ್ತಿ, ಮರಣ ಸನ್ನಿವೇಶ ಗಳು ಸುಂದರವಾಗಿ ಚಿತ್ರಿತವಾಗಿವೆ. 1950ರಲ್ಲಿ ಮುಂಬಯಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಲನದ ಅಧ್ಯಕ್ಷರಾಗಿ ಅವರು ನುಡಿದ ಮಾತು ಇದು :

"ನನಗೆ ಇಬ್ಬರು ತಾಯಂದಿರು: ಕೊಂಕಣಿ ನುಡಿ, ಕನ್ನಡ ನುಡಿ. ನನ್ನ ಹೆತ್ತತಾಯಿ (ಕೊಂಕಣಿ ನುಡಿ) ಯಲ್ಲಿ ಹಾಲಿರಲಿಲ್ಲ. ಆಕೆ ನನ್ನನ್ನು ಕನ್ನಡದ ಉಡಿಯಲ್ಲಿ ಹಾಕಿದಳು. ಅವಳೋ ಪಯಸ್ವಿನಿ, ಬೇಕೆಂಬಷ್ಟು ಹಾಲಿತ್ತು ಆಕೆಯಲ್ಲಿ. ಆಕೆ ನನ್ನನ್ನು ಆರೈದಳು. ಆಕೆಯ ಋಣವನ್ನು ನಾನು ಆಕೆಯ ಹೆಬ್ಬೆರಳು ಒದ್ದೆ ಯಾಗುವಷ್ಟು ಕಣ್ಣೀರು ಸುರಿಸಿಯೂ ತೀರಿಸಲಾರೆ."

ಕನ್ನಡ ನುಡಿಯ ಮೇಲಿನ ಇವರ ಮಮತೆ ಎಷ್ಟು ಗಾಢವಾದುದೆಂದು ಇದರಿಂದ ತಿಳಿಯುತ್ತದೆ. ಇವರು ಕನ್ನಡದ ಮೊದಲ ರಾಷ್ಟ್ರಕವಿ. ಇದು ಕರ್ನಾಟಕಕ್ಕೇ ಒಂದು ಹೆಮ್ಮೆಯ ಮಾತು. ಹಲವಾರು ಭಾಷೆಗಳಲ್ಲಿ ಪ್ರಾವೀಣ್ಯ ಹೊಂದಿದ ಬಹುಭಾಷಾವಿದರು. ನಿಯತಾಗಿ ಪತ್ರ ಮೂಲಕ ಪ್ರತ್ಯುತ್ತರ ಕೊಡುವಂತಹ ನಿಷ್ಕಲ್ಮಷ ಮನೋಭಾವದ ಮಹಾತ್ಮರು. ವಿದ್ವಾಂಸರಲ್ಲಿ ಈ ರೀತಿಯ ಸಾಚಾತನ ಈಗ ಸಿಗುವುದು ಕಷ್ಟ.

ಪೈಗಳು ತಮ್ಮ ಹದಿಹರೆಯದಲ್ಲೇ ಕಾವ್ಯ ಬರೆಯಲು ತೊಡಗಿದರು. ಇವರ ಮೊದಲ ಕವಿತೆ 1900ರಲ್ಲಿ 'ಸುವಾಸಿನಿ' ಪತ್ರಿಕೆಯಲ್ಲಿ ಪ್ರಕಟವಾಯಿತು. ಅದು ಆ ಪತ್ರಿಕೆಯ ಕುರಿತೇ ಬರೆದದ್ದು. ಅದರಲ್ಲಿ ಅವರಿಗೆ 3 ರೂ. ಬಹುಮಾನ ಬಂತಂತೆ. ಹಳಗನ್ನಡ, ಹಳೆಯ ಛಂದಸ್ಸುಗಳಲ್ಲಿ ಹತ್ತಾರು ಕವಿತೆಗಳನ್ನು ಬರೆದು, ಈಗ ಬೆಳೆಯುತ್ತಿರುವ ಕನ್ನಡಕ್ಕೆ ಪ್ರಾಸವು ಸಲ್ಲದು ಎಂಬ ತೀರ್ಮಾನಕ್ಕೆ ಬಂದು 1911 ರಲ್ಲಿ ಪ್ರಾಸ ಬಿಟ್ಟು ಪದ್ಯ ರಚಿಸತೊಡಗಿದರು. ಆಗಿನ ಕಾಲಕ್ಕೆ ಪ್ರಾಸರಹಿತ ಕವಿತೆ ಬರೆಯುವುದೆಂದರೆ ಅದು ಕವಿಯ ಅಸಾಮರ್ಥ್ಯದ ದ್ಯೋತಕವೆಂದೂ ಕ್ರಾಂತಿಕಾರಿ ಮಾರ್ಗವೆಂದೂ ಭಾವಿಸಿದವರಿದ್ದರು.

ಪ್ರಾಸಮನಿಡುವೊಡೆ ನಿನಗಾ
ಯಾಸಮದಪ್ಪೊಡೆ ಬಿಡುವುದು ಪದ್ಯರಚನೆಯಂ ।
ಸಾಸಮಿದಲ್ಲವೆ ಲೋಕದೊ
ಳಾಶಿಸುವುಮ ಮದುವೆಯಂ ನಪುಂಸಕನುಂ ಪೇಳ ॥

ಮಧುರವಾಣಿ, ಫೆ. 1919.

ಎಂದು ಪ್ರಾಸಬದ್ಧವಾಗಿಯೇ ಬೈದವರೂ ಇಲ್ಲದಿಲ್ಲ. ಆದರೆ ಪೈಗಳಿಗೆ ಆನೆ ಹೋದುದೆ ಮಾರ್ಗವಾಗಿತ್ತು. ಅವರು ಉದ್ದೇಶಪೂರ್ವಕವಾಗಿ ಪ್ರಾಸವನ್ನು ತೊರೆದು ಮುಕ್ತ ಛಂದಸ್ಸಿನಲ್ಲಿ ಪದ್ಯ ಬರೆಯತೊಡಗಿದರು. ಮುಂದೆ ಇದೇ ರಾಜಮಾರ್ಗವಾಯಿತು.

ಪೈಗಳು ದ್ವಿತೀಯಾಕ್ಷರ ಪ್ರಾಸವನ್ನು ಮಾತ್ರ ಬಿಟ್ಟರೇ ಹೊರತು ಸರ್ವಥಾ ಪ್ರಾಸವನ್ನು ತೊರೆಯಲಿಲ್ಲ. ಒಂದು ರೀತಿಯಲ್ಲಿ ಅವರು ಅನುಸರಿಸಿದ ಪ್ರಾಸದ ಮಾರ್ಗ ಇನ್ನಷ್ಟು ಕಷ್ಟಕರವಾದುದು. ಅಂತ್ಯಪ್ರಾಸದಲ್ಲಿ ವಿವಿಧ ರೀತಿಯ ಬೆಡಗುಗಳನ್ನು ಮಾಡಿ ತೋರಿಸಿದ್ದರು. ಅದು ಮಾತ್ರ ಈಗಿನವರಿಗೆ ಸಾಹಸವೆಂದು ಕಂಡೀತು. ಏಕಾಂತರ ಪಾದಗಳಲ್ಲಿ ಪ್ರಾಸ 3+1ರಲ್ಲಿ ಭಿನ್ನಪ್ರಾಸ ಇತ್ಯಾದಿಗಳನ್ನು ಅವರ ಕವಿತೆಗಳಲ್ಲಿ ನೋಡಬಹುದು.

ಕವಿತೆಯ ರಚನೆಯಲ್ಲಿ ಇವರು ನಡೆಸಿದ ಪ್ರಯೋಗ ಇಂದಿಗೂ ಆಶ್ಚರ್ಯೆನಿಸಬಹುದು. ಪ್ರಾಸಬದ್ಧವಾದ ಅವರ ಒಂದು ಷಟ್ಪದಿ ನೋಡಿ—

(ಕು. ವ್ಯಾಸಸಿಗೆ)

ಮೊದಲ ಮಗನಾ ಶುಕನು ಭಾಗವ
ತದ ಪುರಾಣದೊಳದ್ದಿ ಕುರುಕುಲ
ಕದನದೀ ಕಥೆಯೊರೆದನಿಲ್ಲಕಟೆಂದು ಮನಮರುಗಿ ।
ಪದೆಯಲನ್ಯ ಕುಮಾರನನು ವೇ
ದದ ಮಹಾಮುನಿ ಕನ್ನಡದ ಶಾ
ರದೆಯೆ ಕನ್ನಡವಕ್ಕಿಯೊಳು ಬೆಸಲಾದಳಲೆ ನಿನ್ನ ॥

ಇದು ಸಹಜಸುಂದರವಾಗಿದ್ದರೂ ಬೆಳೆಯುವ ಕನ್ನಡ ನುಡಿಗೆ ಈ ಧಾಟಿ ಹಿಡಿಸದೆಂದು ಕಂಡಿರಬೇಕು ಪೈಗಳಿಗೆ. ಆಗ ಇಂಗ್ಲಿಷ್ ಭಾಷೆಯ ಸಾಹಿತ್ಯದ ಪ್ರಭಾವ ಕನ್ನಡದ ಮೇಲೆ ತಾನೇ ತಾನಾಗಿ ಬೆಳೆಯತೊಡಗಿತ್ತು. ಸಾನೆಟ್ ಎಂಬುದು ಇಂಗ್ಲಿಷ್ ಪದ್ಯದ ಒಂದು ಧಾಟಿ. ಇಟಲಿಯಲ್ಲಿ ಹುಟ್ಟಿ ಬೆಳೆದ ಇದು ಹತ್ತನೇ ಶತಮಾನದಲ್ಲಿ ಇಂಗ್ಲೆಂಡಿಗೆ ಬಂತು. ಇದರಲ್ಲಿ ಮೊದಲಿನ 8 ಸಾಲುಗಳು ಒಂದು ವಿಧ, ಮತ್ತಿನ 6 ಸಾಲುಗಳು ಒಂದು ಘಟಕ. ಒಟ್ಟಿಗೆ 14 ಸಾಲುಗಳಾದರೂ ಇವನ್ನು ಅಷ್ಟ ಷಟ್ಪದಿಯೆಂದು ಕರೆದರು. ಇನ್ನೊಂದು ಮಾದರಿಯೆಂದರೆ 12 ಸಾಲುಗಳ ಬಳಿಕ ಒಂದು ದ್ವಿಪದಿಯಿಂದ ಕೊನೆಗೊಳ್ಳುವುದು. ಇದನ್ನು ಚತುರ್ದಶಪದಿಯೆಂದರು. ಎರಡೂ ಸಾನೆಟ್ಟುಗಳೇ. ಕ್ರಮೇಣ ಈ ಛಂದೋಬಂಧವನ್ನು 'ಸುನೀತ' ಎಂದು ಕರೆದರು.

ಪೈಯವರ ಮೊದಲನೇ ಸಾನೆಟ್ಟು 'ಕವಿತಾವತಾರ' (1906). ಇವರು ದ್ವಿತೀಯಾಕ್ಷರ ಪ್ರಾಸವನ್ನು ಬಿಟ್ಟರೂ ಅಂತ್ಯಪ್ರಾಸವನ್ನು ಅಂಗೀಕರಿಸಿದರು. ಇವರ ಕವಿತೆಗಳಲ್ಲಿ ಬದ್ಧಪ್ರಾಸ, ಮುಕ್ತಪ್ರಾಸ, ಆವರ್ತನ ಪ್ರಾಸ ಮುಂತಾದ ವೈವಿಧ್ಯಗಳನ್ನು ಕಾಣಬಹುದು.

ಮಧುರೆಯೊಬ್ಬಳು ವೇಶ್ಯೆ ಹೆಸರು ವಾಸವದತ್ತೆ
ತನಗೆ ತಾನೆಣೆಯು ಚೆಲುವೆ ಕುರಂಜಿ ಹೂವೆ,
ತನ್ನ ಸಂದರ್ಶನಕೆ ನೂರು ವರಹವನಿತ್ತೆ
ಕೊಂಬ ದೃಢಶೀಲೆ, ಧನಿಕರ ಧನದ ಕೋವೆ ('ವಾಸವದತ್ತೆ')

ಇಂತಹ ಹತ್ತಾರು ಪದ್ಯಗಳಲ್ಲಿ ಅವರ ಪ್ರಾಸಗಳ ಲಾಸ್ಯವನ್ನು ಕಾಣಬಹುದು. ಅವರ ಬಿಡಿಪದ್ಯಗಳಾಗಲಿ, ಸಾನೆಟ್ಟುಗಳಾಗಲಿ ಪ್ರಾಸಬದ್ಧವಾಗಿಯೇ ಇವೆ. ಮುಂದೆ ಗೊಲ್ಗೊಥಾ, ವೈಶಾಖಿಗಳನ್ನು (ಖಂಡಕಾವ್ಯ) ಬರೆಯುವಾಗ ಪ್ರಾಸದ ಗೊಡವೆಯನ್ನು ಸಂಪೂರ್ಣವಾಗಿ ತ್ಯಜಿಸಿದರು. ಈ ಎರಡು ಖಂಡಕಾವ್ಯಗಳೂ ಕನ್ನಡ ಸಾಹಿತ್ಯದಲ್ಲಿ ಸ್ಥಾಯಿಯಾಗಿ ನಿಲ್ಲಬಲ್ಲವು.

ಇವರು ಪಂಡಿತ, ಸಂಶೋಧಕ, ಬಹುಭಾಷಾವಿದ, ಕವಿ. ಹೀಗಾಗಿ ಇವರ ಮನೋಧರ್ಮ ಲಲಿತ ಶೃಂಗಾರದ ಕಡೆಗೆ ಒಲಿದಿಲ್ಲ. ಕೇವಲ ಚೆಲ್ಲು ಶೃಂಗಾರವನ್ನೇ ಬಯಸುವ ಪೇಶಲಬುದ್ಧಿಗಳಿಗೆ ಇಲ್ಲಿ ಏನೂ ಸಿಗದು. ಇವರ ಶೃಂಗಾರವು ಭಕ್ತಿಯೆಡೆಗೆ ತಿರುಗಿ ಮಾಗಿದೆ. ಬೌದ್ಧಧರ್ಮದ ಭೂತದಯೆಯಲ್ಲಿ ಪರಿಪಾಕವನ್ನು ಕಂಡಿದೆ, ಬದುಕಿನ ಸಮರಸದಲ್ಲಿ ಸಾರ್ಥಕತೆಯನ್ನು ಬಯಸಿದೆ.

'ಯದುನಾಥನೆ ಯೂದನಾಥನಲ್ಲವೆ?' ಎನ್ನುವ ಕವಿ 'ಶ್ವಪಚನನು ಜತೆಗೊಳದೆ ದಿವಕೇರ್ವೆನೆಂತು?' ಎಂದು ಕೇಳುತ್ತಾರೆ. ಇವರ ಶೃಂಗಾರವು ದೈವಭಕ್ತಿಯಲ್ಲಿ ಹಾಗೂ ನಾಡು–ನುಡಿಗಳ ಪ್ರೇಮದಲ್ಲಿ ವಿಲೀನವಾಗಿದೆ.

ಕವಿತೆ ಬರೆಯುವ ಕಾಲದಲ್ಲೇ ಅವರಿಗೆ ಸಂಶೋಧನೆಯ ಗೀಳು ಹಿಡಿದಿರಬೇಕು. ಕವಿಗಳ ಕಾಲನಿರ್ಣಯ, ಇತಿಹಾಸ, ಶಾಸನ ಮುಂತಾದುವುಗಳ ಮೇಲೆ ಇವರು ನಡೆಸಿದ ಸಂಶೋಧನೆಯು ಇಂದಿಗೂ ದಾರಿದೀಪವಾಗಿದೆ. ಅವರ ಸಂಶೋಧನೆಯಲ್ಲಿ ಪ್ರಮುಖವಾದುವು:

ತುಳುನಾಡಿನ ಶಾಸನಗಳು,
ಕೆಲವು ಪ್ರಾಚೀನ ರಾಜಮನೆತನಗಳು,
ಭಾರತ ಮತ್ತು ಗ್ರೀಸಿನ ಸಂಬಂಧ,
ಗೊಮ್ಮಟೇಶ್ವರತ್ರಯರ ಸ್ಥಾಪನೆಯ ಕಾಲ,
ಹಳಗನ್ನಡ ಕವಿಕಾಲನಿರ್ಣಯ—ಇತ್ಯಾದಿ.

ಪೈಗಳು ನಾಟಕಗಳನ್ನೂ ಬರೆದಿದ್ದರು. 'ತಾಯಿ' ನಾಟಕದಲ್ಲಿ ಮಲ್ಲಿಗೆ, ಸಂಪಗೆ, ದುಂಬಿ ಈ ಕಲ್ಪಿತ ಪಾತ್ರಗಳೇ ತಾಯಿಯ ಮನೋಭಾವವನ್ನು ಬಿಂಬಿಸುತ್ತವೆ.

ನೋ (Noh) ನಾಟಕಗಳು ಸುಮಾರು 4 ಇವೆ. ಇವು ಜಪಾನೀ ನಾಟಕಗಳ ಅನುವಾದ (ನೋ ಎಂದರೆ ಸಂಪನ್ನತೆ, ಸಿದ್ಧಿ accomplishment ಎಂದು

ಅರ್ಥ) ಈ ನಾಟಕಗಳಲ್ಲಿ ಮಾತಿಗಿಂತ ಹಾವಭಾವ ಗೀತಗಳಿಗೇ ಹೆಚ್ಚು ಮಹತ್ವವಿದೆ. ಇದು ಒಂದು ವಿಶಿಷ್ಟವಾದ ಕೊಡುಗೆಯೇ ಎಂದು ಹೇಳಬೇಕು.

'ಚಿತ್ರಭಾನು ಅಥವಾ ೧೯೪೨' ಇನ್ನೊಂದು ನಾಟಕ. ಇದರ ಹೆಸರೇ ಹೇಳುವಂತೆ 1942ರ Quit India ಚಳವಳಿಯಲ್ಲಿ ಸೇರಿಕೊಂಡ ತರುಣನೊಬ್ಬನ ಬಲಿದಾನವನ್ನು ಕುರಿತ ವಸ್ತು ಇದರಲ್ಲಿ ಚಿತ್ರಿತವಾಗಿದೆ. ಇದು ಸ್ವಾತಂತ್ರ್ಯದ ಹೋರಾಟವನ್ನು ತೀರ ಭಾವುಕವಾಗಿ ಚಿತ್ರಿಸುತ್ತದೆ. ಅಲ್ಲದೆ ವಸ್ತುನಿಷ್ಠವಾಗಿ ವಿಶದೀಕರಿಸುವುದಿಲ್ಲ. ಆದರೂ ಇದೊಂದು ಅಪೂರ್ವ ನಾಟಕ. 'ಹೆಬ್ಬೆರಳು' ಮಾತ್ರ ಗೋವಿಂದ ಪೈಗಳ ನಾಟಕಗಳಲ್ಲೇ ವಿಶಿಷ್ಟವೂ ಅಪೂರ್ವವೂ ಆದುದು. ವ್ಯಾಸಭಾರತದಲ್ಲಿ ಬರುವ ಕತೆಯನ್ನೇ ಮೂಲ ಹಂದರವಾಗಿಟ್ಟುಕೊಂಡು, ಭಾರತ ಸಂಗ್ರಾಮದ ದುರಂತದ ಬೀಜವೆಲ್ಲಿದೆಯೆಂಬುದನ್ನು ಶೋಧಿಸಹೊರಟ ನಾಟಕ. ಇದು ಹಳಗನ್ನಡ ಭಾಷೆಯಲ್ಲಿ ಗ್ರೀಕ್ ಮಾದರಿಯಲ್ಲಿ ರಚಿತವಾಗಿದೆ. ಆರ್ಯ–ಅನಾರ್ಯ ಸಂಸ್ಕೃತಿಗಳಲ್ಲಿ ಒಂದು ಮತ್ತೊಂದನ್ನು ಒಪ್ಪಿಕೊಂಡರೂ ದೂರವಿರಿಸುವ ಕ್ರಿಯೆ ಈ ನಾಟಕದಲ್ಲಿ ಚಿತ್ರಿತವಾಗಿದೆ. ಇಲ್ಲಿ ಹಿರಣ್ಯಧನು ಏಕಲವ್ಯನ ಚಿಕ್ಕ ತಂದೆ. ಆತನಿಗೆ ತನ್ನ ಸಂಸ್ಕೃತಿಯ ಮೇಲೆ ಸಾಕಷ್ಟು ಅಭಿಮಾನ ಇದೆ. ಏಕಲವ್ಯನ ತಂದೆ ಆರ್ಯರ ಜತೆ ನಡೆದ ಯುದ್ಧದಲ್ಲಿ ಮಡಿದುಹೋಗಿದ್ದ. ಆರ್ಯರಿಗೆ ಯಾವಾಗಲೂ ಅನಾರ್ಯರ ಮೇಲೆ ಕೀಳುಭಾವನೆಯಿದ್ದದ್ದೇ. ಆದಕಾರಣವೇ ದ್ರೋಣ ಏಕಲವ್ಯನನ್ನು ಶಿಷ್ಯನಾಗಿ ತೆಗೆದುಕೊಳ್ಳಲು ನಿರಾಕರಿಸಿದ. ಆದರೂ ಪರೋಕ್ಷವಾಗಿ ದ್ರೋಣನನ್ನೇ ಗುರುವೆಂದು ನಂಬಿ ಕಲಿತ ಏಕಲವ್ಯನಿಗೆ ಸಿಕ್ಕಿದುದಾದರೂ ಏನು?

"ಕೆಯ್ಗಾಣಿಕೆಯನೀವೆ, ಕೆಯ್ಗೆ ಕಾಣಿಕೆ ಕೇಳಲೇವೆ?"

ಎಂದು ಹಿರಣ್ಯಧನು ಎಚ್ಚರಿಸಿದರೂ ಫಲವಾಗಲಿಲ್ಲ. ದ್ರೋಣ ಗುರುದಕ್ಷಿಣೆಯಾಗಿ ಏಕಲವ್ಯನ ಹೆಬ್ಬೆರಳನ್ನು ಕಾಣಿಕೆಯಾಗಿ ತೆಗೆದುಕೊಂಡೇಬಿಟ್ಟ. ಈ ಮನೋಭಾವವೇ ಭಾರತ ಯುದ್ಧದ ಸಂಗ್ರಾಮದ ಧೂಮಕೇತುವಾಯಿತೆಂಬ ಸೂಚನೆಯೊಂದಿಗೆ ನಾಟಕ ಮುಗಿಯುತ್ತದೆ.

ಎಲ್ಲಕ್ಕಿಂತ ಮಹೋನ್ನತ ಕೃತಿಗಳೆಂದರೆ ಪೈಗಳ 'ಗೊಲ್ಗೊಥಾ' ಮತ್ತು 'ವೈಶಾಖಿ'. ಇವೆರಡೂ ಸರಳರಗಳೆಯಲ್ಲಿ ರಚಿತವಾದ ಕಥನಕಾವ್ಯಗಳು ಅಥವಾ ಖಂಡಕಾವ್ಯಗಳು. ಮೊದಲನೆಯದು 377 ಸಾಲುಗಳುಳ್ಳದು (1931ರಲ್ಲಿ ರಚಿತವಾಗಿ 1937ರಲ್ಲಿ ಮೊದಲ ಬಾರಿಗೆ ಪುಸ್ತಕರೂಪದಲ್ಲಿ ಪ್ರಕಟವಾಯಿತು). 'ವೈಶಾಖಿ' ಇದಕ್ಕಿಂತ ತುಸು ದೊಡ್ಡದಾದ ಖಂಡಕಾವ್ಯ ಮತ್ತೆ ಪ್ರಕಟವಾಯಿತು. ಇವೆರಡೂ ಮಹಾತ್ಮರ ಮರಣಸನ್ನಿವೇಶಗಳನ್ನು ಚಿತ್ರಿಸುವ ಕಾವ್ಯಗಳು. ಇದೇ ರೀತಿ ಕೃಷ್ಣನ ಅವಸಾನವನ್ನು ಕುರಿತು 'ಪ್ರಭಾಸ' ಎಂಬ ಖಂಡಕಾವ್ಯವನ್ನೂ, ಮಹಾತ್ಮಾಗಾಂಧಿಯವರ ಅಂತ್ಯಕಾಲವನ್ನು ಕುರಿತು 'ದೇಹಲಿ' ಎಂಬ ಖಂಡಕಾವ್ಯವನ್ನು ರಚಿಸಿರುವರು. ಇವೆರಡಕ್ಕೆ ಆ ಕಾವ್ಯಗಳ ಮನ್ನಣೆ ದೊರೆಯಲಿಲ್ಲ.

ಪೈಯವರ ಬರವಣಿಗೆಯೆಲ್ಲಾ ಕನ್ನಡನುಡಿದೇವಿಗೆ ಸಮರ್ಪಿತವಾದ ಹೂವುಗಳೇ. ಹೊಸಗನ್ನಡದ ನವೋದಯದ ಕಾಲದಲ್ಲಿ ಸಾಹಿತ್ಯದ ನಾನಾ ಪ್ರಕಾರಗಳಲ್ಲಿ ತಿದ್ದಿ ತೀಡಿ ಬರೆದ ಅವರ ಲೇಖನಗಳು ಇಂದಿಗೂ ಹೊಸ ಕಂಪನ್ನು ಬೀರಬಲ್ಲವು. ಒಬ್ಬ ಧೀಮಂತ ಸಾಹಿತಿ ಹೇಗೆ ಬದುಕಬೇಕೋ ಹಾಗೆ ಬದುಕಿ, ಕನ್ನಡಕ್ಕಾಗಿ ದುಡಿದು ಮಡಿದ, ಅವರ ಚೇತನ ಅಮರವಾಗಿದೆಯೆನ್ನಲೆ? ಅದು ತೀರ ಸಾಮಾನ್ಯವಾದ ಮಾತು. ಅವರು ಕರ್ಣಾಟಕದ ಏಕೀಕರಣಕ್ಕಾಗಿ ತುಂಬಾ ಶ್ರಮಿಸಿದರು. ಕಾಸರಗೋಡು ಕೇರಳಕ್ಕೆ ಸೇರಿಹೋಯಿತಲ್ಲ ಎಂಬ ವ್ಯಥೆ ಅವರಿಗೆ ಹೇಳ ತೀರದು. ಆದರೂ ಕೊನೆಯವರೆಗೂ ಅವರ ವಿಳಾಸದಲ್ಲಿ, ಮಂಜೇಶ್ವರ, ಕರ್ಣಾಟಕ ರಾಜ್ಯ ಎಂದೇ ಬರೆಯುತ್ತಿದ್ದರು.

ಅವರಿಗೆ ನಾಡು–ನುಡಿಗಳ ಮೇಲೆ ಅಪಾರವಾದ ಭಕ್ತಿ. ಕವಿತಾಸಾಮರ್ಥ್ಯವಿದೆಯೆಂದು ತೀರ ಲಘು ವಿಷಯಗಳನ್ನಾಧರಿಸಿ ಚೆಲ್ಲು ಶೃಂಗಾರದ ಕವಿತೆಗಳನ್ನು ಅವರು ಬರೆಯಲಿಲ್ಲ. ಏನಿದ್ದರೂ ಅವರ ಕಾವ್ಯದಲ್ಲಿ ಚಿಂತನಪರತೆ, ಗಟ್ಟಿತನ, ಮಾನವೀಯತೆ ಹೆಪ್ಪುಗಟ್ಟಿ ನಿಂತಿರುವುದನ್ನು ಕಾಣಬಹುದು. ಅಗಾಧವಾದ ಪಾಂಡಿತ್ಯ, ಬಹುಭಾಷಾಭಿಜ್ಞತೆ ಎಷ್ಟರಮಟ್ಟಿನ ವಿನಯವನ್ನು ತರಬಲ್ಲುದೋ ಅಷ್ಟನ್ನೂ ಅವರಲ್ಲಿ ಕಾಣಬಹುದಿತ್ತು. ಪಾಂಡಿತ್ಯದಿಂದ ಕೂಡಿದ ಬುದ್ಧಿಶಕ್ತಿಯೊಂದಿಗೆ ಮಗುವಿನ ಮನಸ್ಸು ಬೆರೆತುಕೊಂಡಿದ್ದುದನ್ನು ಇವರಂತಹ ತೀರ ಕೆಲವರಲ್ಲಿ ಮಾತ್ರ ಕಾಣಬಹುದು. ○

# ★'ಆದಿಪುರಾಣ'ದ ತ್ರಿಪದಿಯೊಂದರ (೬-೧೩) ಪಾಠವಿಚಾರ

—ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರೀ

'ಆದಿಪುರಾಣ'ದ ಆರನೆಯ ಆಶ್ವಾಸದಲ್ಲಿ ಒಂದು ಕಡೆ, ಆದಿನಾಥನ ಏಳನೆಯ ಭವದ ಜೀವನಾದ ಸುವಿಧಿ ಮಹಾರಾಜನ ಭವಾನುಬಂಧಿಜೀವನೆನಿಸಿದ ವರದತ್ತನೂ ಇತರ ಭವಾನುಬಂಧಿಜೀವರಾದ ರಾಜರೂ ಸುವಿಧಿಯೊಂದಿಗೆ ಅಚ್ಯುತಕಲ್ಪದಲ್ಲಿ ಜೀವಿಸಿದರೆಂಬ ಕಥಾಂಶವೊಂದು ತ್ರಿಪದಿಯ ರೂಪದಲ್ಲಿ ಸಂಕ್ಷೇಪವಾಗಿ ನಿರೂಪಿತವಾಗಿದೆ. ಈ ತ್ರಿಪದಿ ಆ ಗ್ರಂಥದ ಪ್ರಥಮ ಪರಿಷ್ಕರಣದಲ್ಲಿ (೧೯೦೦), ಎಸ್. ಜಿ. ನರಸಿಂಹಾಚಾರ್ ಅವರು ಸಂಪಾದಿಸಿರುವುದರಲ್ಲಿ, ಈ ರೀತಿಯಾಗಿದೆ:

**ವರದತ್ತಂ ಮೊದಲಾಗೆ ಧರಣೀಶರವರ್ಗೆಲ್ಲಂ**
**ಸುರಲೋಕಂ ಸುವಿಧಿಯೊಡನಾಡುದಂತುಟಿ**
**ನೆರೆದರನಿತೀ ಸುರಲೋಕಂ ॥**

ಕೆ. ಜಿ. ಕುಂದಣಗಾರ ಮತ್ತು ಎ. ಪಿ. ಚೌಗುಲೆ ಅವರು ಸಂಯುಕ್ತವಾಗಿ ಸಂಪಾದಿಸಿರುವ ಆದಿಪುರಾಣದ ದ್ವಿತೀಯ ಪರಿಷ್ಕರಣದಲ್ಲಿಯೂ (೧೯೫೩) ಈಚೆಗೆ ಕನ್ನಡ ಸಾಹಿತ್ಯ ಪರಿಷತ್ತು ಗದ್ಯಾನುವಾದದೊಂದಿಗೆ ಪ್ರಕಟಿಸಿರುವ ಅದರ ಇನ್ನೊಂದು ಪರಿಷ್ಕರಣದಲ್ಲಿಯೂ (೧೯೮೦) ಈ ಮೇಲಿನ ತ್ರಿಪದಿಯ ಪಾಠ, ಮೇಲೆ ಕೊಟ್ಟಿರುವಂತೆಯೇ ಇದೆ. ತ್ರಿಪದಿ ಛಂದಸ್ಸನ್ನು ವಿವೇಚಿಸುವಾಗಲೂ ಬೇರೆ ಸಂದರ್ಭಗಳಲ್ಲಿಯೂ ವಿದ್ವಾಂಸರು ಈ ಪದ್ಯಪಾಠವನ್ನು ಹೀಗೆಯೇ ಉದ್ಧರಿಸಿರುವುದು ಕಾಣುತ್ತದೆ.[1] ಈ ಯಾವ ಮೂಲಗಳಲ್ಲಿಯೂ ಪಾಠಭೇದಗಳನ್ನು ತೋರಿಸಿಲ್ಲ; ಚರ್ಚಿಸಿಲ್ಲ.

ಎಲ್. ಬಸವರಾಜು ಅವರು ಸಂಪಾದಿಸಿರುವ ಆದಿಪುರಾಣದ ತೃತೀಯ ಪರಿಷ್ಕರಣದಲ್ಲಿ (೧೯೭೬), ಸಂಪಾದಕೀಯ ಸವರಣೆ ಮತ್ತು ಪಾಠಭೇದಗಳ ಸೂಚನೆಯೊಂದಿಗೆ ಇದೇ ತ್ರಿಪದಿ ಹೀಗೆ ಪ್ರಕಟವಾಗಿದೆ:

---

1 ನೋಡಿ: 'ಕನ್ನಡ ಕೈಪಿಡಿ' (೧೯೫೫) I–ii, ಪು. ೧೨೨ ; ಎಂ. ಚಿದಾನಂದಮೂರ್ತಿ, 'ಸಂಶೋಧನ ತರಂಗ', ಭಾಗ ೧, (೧೯೬೬), ಪು. ೨೧೧ ; ರಂ. ಶ್ರೀ. ಮುಗಳಿ, 'ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು (೧೯೭೩), ಪು. ೭೨೭ ; ಟಿ. ವಿ. ವೆಂಕಟಾಚಲಶಾಸ್ತ್ರೀ, 'ಕನ್ನಡ ಛಂದಃಸ್ವರೂಪ' (೧೯೭೮), ಪು. ೪೦೦.

ವರದತ್ತಂ ಮೊದಲಾಗೆ ಧರಣೀಶರವರ್ಗೆಲ್ಲಂ
[1]ಸುರಲೋಕಂ[1] ಸುವಿಧಿಯೊಡನಾದು[2]ದಂತಂತೆ[2] !
[3]‘ನೆರಪಿದರೆನಿತೀ’[3] ಸುರಲೋಕಂ ?

ಪಾಠಾಂತರಗಳು :

[1] ಸುರಪದವಿ (ಐ). [2] ದೆಂದಡೆ (ಐ). [3] ನೆರೆದರನಿಲೆ (ಹ), ನೆರೆದರಾನಿತಿ (ದ್ವಿ), ನೆರವಿದರೆನಿತೀ (ಐ), ನೆರೆದರನಿತೀ (ಏ) (ನ) (ಕು).

ಈಗ ೧೯೦೦ರ ಪರಿಷ್ಕರಣದ ಪಾಠ ಸರಿಯೋ ಅಥವಾ ೧೯೭೬ರ ಪರಿಷ್ಕರಣದ ಪಾಠ ಸರಿಯೋ, ಅಥವಾ ಇವೆರಡರಿಂದ ಬೇರೆಯಾಗಿ ಪದ್ಯಪಾಠವಿದ್ದಿರಬಹುದೇ ಎನ್ನುವುದು ನಾವು ಪರಿಶೀಲಿಸಬೇಕಾದ ವಿಷಯುವಾಗಿದೆ.

ಪದ್ಯದ ಅರ್ಥವೇನು? ೧೯೪೦ರ ಪರಿಷ್ಕರಣವಲ್ಲಿ, ಗದ್ಯಾನುವಾದ ಭಾಗದಲ್ಲಿ ಅದನ್ನು ಹೀಗೆ ಬರೆದಿದೆ: “ವರದತ್ತನೇ ಮೊದಲಾದ ರಾಜರೆಲ್ಲರೂ ಸುವಿಧಿಯೊಡನೆ ಸುರಲೋಕದಲ್ಲಿ ಸೇರಿಕೊಂಡರು. ಹೀಗೆ ಸುರಲೋಕವು ಅವರೆಲ್ಲರಿಂದ ಯುಕ್ತವಾಯಿತು” (ಪು. ೨೫೮).

ಒಂದು ಬಗೆಯಾಗಿ ತಾತ್ಪರ್ಯವನ್ನಿಲ್ಲಿ ಹೇಳಿರುವ ಈ ಪ್ರಯತ್ನದಲ್ಲಿ ಸೂಚಿತವಾಗಿರುವ ಅರ್ಥ ಸರಿಯೋ? ಸರಿಯಲ್ಲವಾದರೆ, ಅನ್ವಯಕ್ರಮಾನುಸಾರವಾಗಿ ಪ್ರತಿಪದಾರ್ಥ ಹೇಗಿರಬಹುದು? ಇರುವಂತೆ, ಅರ್ಥವನ್ನು ಹೀಗೆ ಹೇಳಬೇಕಾಗುತ್ತದೆ: “ವರದತ್ತ ಮೊದಲಾಗಿ ಆ ರಾಜರಿಗೆಲ್ಲ ಸುವಿಧಿಯೊಂದಿಗೆ ಸುರಲೋಕವಾಯಿತು. ಹಾಗೆಯೇ ಈ ಸುರಲೋಕ ಅಷ್ಟು ಒಟ್ಟಾದರು.”

ಮೇಲುನೋಟದಲ್ಲಿಯೇ ತೋರುವಂತೆ, ಅರ್ಥ ಅಸಂಗತವಾಗಿರುವುದು ಮೂರನೆಯ ಪಾದದ ಅರ್ಥವಿವರಣೆಯಲ್ಲಿ ಎದ್ದುತೋರುತ್ತಿದೆ. ವಾಸ್ತವವಾಗಿ ವಿಚಾರಕ್ಕೆ ವಿಷಯುವಾಗಿರುವ ಭಾಗವಾದರೂ ಇದೇ. ೧೯೪೦ರ ಪರಿಷ್ಕರಣದ ಗದ್ಯಾನುವಾದ ಭಾಗದಲ್ಲಿ ಬರೆದಿರುವಂತೆ “ಹೀಗೆ ಸುರಲೋಕವು ಅವರೆಲ್ಲರಿಂದ ಯುಕ್ತವಾಯಿತು” ಎಂಬುದಕ್ಕೆ ಹೊಂದುವಂತೆ ಮೂಲದ ಭಾಗ ಇರಬೇಕಾದರೆ, ಅದು “ನೆರೆದರನಿತೀ ಸುರಲೋಕಂ” ಎಂದಿರದೆ “ಅಂತು ನೆರೆದುದನಿಬರಿನೀ ಸುರಲೋಕಂ” ಎಂಬ ರೀತಿಯಲ್ಲಿರಬೇಕಾಗಿದ್ದಿತು. ಈಗ ಶಬ್ದಾರ್ಥದ ತೊಡಕನ್ನು, ಹೇಗೋ ಒಂದು ರೀತಿಯಲ್ಲಿ ಸಂದರ್ಭಬಲದಿಂದ, ಊಹೆಯಿಂದ ನಿವಾರಿಸಿದ ಹಾಗೆ, ದಾಟಿಕೊಂಡು ಹೋಗಿರುವ ಹಾಗೆ ತೋರುತ್ತದೆ.

ಎಲ್. ಬಸವರಾಜು ಅವರು ಮೊದಲ ಸಲ, ಈ ಪದ್ಯಪಾಠದಲ್ಲಿ ಸಮಸ್ಯೆಯನ್ನು ಮನಗಂಡಿದ್ದಾರೆ. ಅರ್ಥಕ್ಲೇಶವಿರುವ ಮೂರನೆಯ ಪಾದವನ್ನು “[ನೆರಪಿದರೆನಿತೀ] ಸುರಲೋಕಂ” ಎಂಬುದಾಗಿ ತಿದ್ದಿಕೊಟ್ಟಿದ್ದಾರೆ. ಇದಕ್ಕೆ ಆಧಾರವೇನು? ಪ್ರಾಯಶಃ ಒಂದು ಹಸ್ತಪ್ರತಿಯ (ಐ) “ನೆರವಿವರೆನಿತೀ” ಎಂಬ ಪಾಠಾಂತರದ ಸಹಾಯದಿಂದ, ಅದಕ್ಕೆ ಹತ್ತಿರವಾಗಿ ಈ ತಿದ್ದುಪಾಟು ಮಾಡಿರಬಹುದು; ಅಥವಾ ತಿದ್ದುಪಾಟನ್ನು

ಸ್ವತಂತ್ರಿಸಿಯೂ ಮಾಡಿರಬಹುದು. ಅರ್ಥವೇನಾಯಿತು? ವರದತ್ತಾದಿಗಳು "ಈ ಸುರಲೋಕವನ್ನು ಎಷ್ಟು ತುಂಬಿದರು?" (=ಎಷ್ಟು ಸಲ ತುಂಬಿದರು?) ಎಂದೇನಾದರೂ ಇಟ್ಟುಕೊಂಡು, "ಎಷ್ಟೋ ಸಲ ತುಂಬಿದರು" ಎಂಬುದಾಗಿ ಅಧ್ಯಾಹಾರ ಮಾಡಿದ ಉತ್ತರವನ್ನು ಪಡೆಯಬಹುದೇ? ಆದರೆ ಸಂಪಾದಕರೇ ಇಲ್ಲಿ, "ನೆರಪು: ಗಳಿಸು, ಸಂಪಾದಿಸು" ಎಂಬುದಾಗಿ ಅರ್ಥ ಬರೆದಿರುವುದರಿಂದ (ನೋಡಿ: ನೆರೆ; ಅರ್ಥಕೋಶ, ಪು. ೫೭೮), "ಈ ಸುರಲೋಕವನ್ನು ಎಷ್ಟು ಗಳಿಸಿದರು (ಅಥವಾ ಸಂಪಾದಿಸಿದರು)" ಎಂದು ಇಟ್ಟುಕೊಳ್ಳಬೇಕಾಗುವುದು. ಹೀಗಿಟ್ಟು ಕೊಂಡರೆ, "ಎಷ್ಟೋ ಗಳಿಸಿದರು" ಅಥವಾ "ಬಹುವಾಗಿ ಗಳಿಸಿದರು" ಎಂದು ಉತ್ತರ ವನ್ನು ಅಧ್ಯಾಹಾರ ಮಾಡಿಕೊಳ್ಳಬೇಕಾಗುತ್ತದೆ. ಗಳಿಸಿದ್ದು ಸುರಲೋಕವೋ, ಸುರಲೋಕ ಸೌಖ್ಯವೋ? ವಾಕ್ಯರಚನೆಯಾಗಲಿ, ಅರ್ಥವಾಗಲಿ ಈ ಸವರಣೆಯಿಂದ ಸಮಂಜಸವಾಗಿ ಹೊಂದಿಕೊಳ್ಳುವಂತೆ ತೋರುವುದಿಲ್ಲ. ಕೊಟ್ಟಿರುವ ಮತ್ತೆರಡು ಪಾಠಾಂತರಗಳಿಂದ, "ನೆರೆದರಸಿಲೆ ಸುರಲೋಕಂ" ಎಂದೂ "ನೆರೆದರಾಸಿತಿ ಸುರ ಲೋಕಂ" ಎಂದೂ ಪಾದಗಳನ್ನು ರೂಪಿಸಿಕೊಂಡರೆ, ಎರಡರಿಂದಲೂ ಏನೂ ಅರ್ಥವೇ ಹೊರಡುವುದಿಲ್ಲ. ಹೀಗಾಗಿ, ಮೇಲಿನ ಸಂಪಾದಕೀಯ ಸವರಣೆಯಾಗಲಿ, ಪಾಠಾಂತರ ಸ್ವೀಕಾರವಾಗಲಿ ಪ್ರಸ್ತುತ ಸಮಸ್ಯೆಗೆ ಪರಿಹಾರ ಸೂಚಿಸಲಾರವು.

ಈಗ ಬಾಹ್ಯಸಾಕ್ಷ್ಯಗಳೇನಾದರೂ ಸಹಾಯವಾಗಬಹುದೇ, ಗಮನಿಸೋಣ. ಪಂಪನ 'ಆದಿಪುರಾಣ'ಕ್ಕೆ 'ಪೂರ್ವಪುರಾಣ' ಆಧಾರ ತಾನೇ? ಅಲ್ಲಿ ಸದೃಶ ಕಥಾ ಭಾಗವನ್ನು ಹೇಳುವ,

> ಪೂರ್ವೋಕ್ತಾ ನೃಪಪುತ್ರಾಶ್ಚ ವರದತ್ತಾದಯಃ ಕ್ರಮಾತ್ ।
> ಸಮುಜಾಯಂತ ಪುಣ್ಯೈಃ ಸ್ವೈಸ್ತತ್ರ ಸಾಮಾನಿಕಾಃ ಸುರಾಃ ॥
>
> (ಪರ್ವ ೧೦—ಶ್ಲೋಕ ೧೭೨)

ಎಂಬ ಶ್ಲೋಕವೊಂದು ಬರುತ್ತದೆ. "ಮೊದಲು ಹೇಳಿದ ವರದತ್ತ ಮೊದಲಾದ ರಾಜಪುತ್ರರೂ ಕ್ರಮದಿಂದ ಆ ಸ್ವರ್ಗದಲ್ಲಿ ಸಾಮಾನಿಕದೇವರಾಗಿ ಹುಟ್ಟಿದರು" ಎಂಬರ್ಥದ ಈ ಉಲ್ಲೇಖದಲ್ಲಿ ಎರಡು ಸಲ ಸುರಲೋಕದ ಮಾತೇ ಬರುವುದಿಲ್ಲ ವಾದ್ದರಿಂದ ಪಂಪ ಮೂಲವನ್ನು ಗಮನಿಸಿಯೂ ಸ್ವತಂತ್ರವಾಗಿ ತನ್ನ ತ್ರಿಪದಿಯನ್ನು ಕಟ್ಟಿದ್ದಾನೆ ಎಂದು ಭಾವಿಸಬಹುದು.

ಪಾಠಸಮಸ್ಯೆಯ ಪರಿಹಾರಕ್ಕೆ ನಯಸೇನನ 'ಧರ್ಮಾಮೃತ' (೧೧೧೨) ಒದಗಿಸುವ ಸಾಕ್ಷ್ಯವನ್ನು ಇಲ್ಲಿ ಪ್ರಸ್ತಾವಿಸಬಹುದು :

> ...ಶ್ರಾವಕರೊಡನಾಡುವರಿಂತೆಂದರ್
> ಈ ರುಜೆಯೊಂದು ವೇದನೆಗೆ ಬೆಚ್ಚದೆ ಕಾಂಕ್ಷಿಸಿ ತನ್ನ ಮೆಚ್ಚಿದಾ
> ಹಾರಮನುಮಕ್ಕೆ ಬಂದೊಡರೆಪಲ್ದೆ ಜಿಂದೋವದೆ ಕಂಡ ಕಂಡರಂ
> ಸೈರಣೆಗೆಟ್ಟು ಬೇಡದೆ ಜಿನಾಗಮದೋಜೆಯೊಳೋಜೆದಪ್ಪದೀ
> ವೀರನ ವೀರವೃತ್ತಿ[ಯ]ುಳವಂ ನೆಱೆ ಬಣ್ಣಿಸಲಾರ್ಪನಾವನೋ ॥

ಎಂದು ಬಣ್ಣಿಸುವವರಂ ಕಂಡು ನೇರಿದರ ನೀತಿ ಸುರಲೋಕಮೆಂಬುದು
ತಪ್ಪದೆನುತ್ತುಂ ಪೋಗೆ...

(ಆಶ್ವಾಸ ೪, ಪದ್ಯ ೮೭-೮೯)

ಈ ಉದ್ಧೃತ ಕೃತಿಭಾಗದಲ್ಲಿ "ನೇರಿದರ ನೀತಿ ಸುರಲೋಕಂ" ಎಂಬ ಉಕ್ತಿ ನಮ್ಮ ಗಮನವನ್ನು ಸೆಳೆಯುತ್ತದೆ. ಇದು ಇಲ್ಲಿ ಬಂದಿರುವ ರೀತಿಯನ್ನು ಗಮನಿಸಿದರೆ, ಲೋಕೋಕ್ತಿಯಾಗಿ ಆ ಕಾಲದಲ್ಲಿ, ಆ ಕವಿಯಿದ್ದ ಪ್ರಾಂತದಲ್ಲಿಯಾದರೂ, ಪ್ರಚಲಿತವಾಗಿದ್ದಿರಬೇಕು ಎಂದು ಊಹಿಸಲು ಅವಕಾಶವಾಗುತ್ತದೆ.

'ಧರ್ಮಾಮೃತ'ದ ಪ್ರಸ್ತುತ ಕಥಾಸಂದರ್ಭವಿದು: ರೌರವಪುರದ ಅರಸು ಒದ್ದಾಯನನು ನಿರ್ವಿಚಿಕಿತ್ಸೆಯ ಆಚರಣೆಯಲ್ಲಿ ಗಣ್ಯನೆಂದು ಸೌಧರ್ಮೇಂದ್ರನು ಒಮ್ಮೆ ದೇವಸಭೆಯಲ್ಲಿ ಶ್ಲಾಘಿಸಿದನು. ಆಗ ವಾಸವನೆಂಬ ದೇವನು ಅದನ್ನು ಸ್ವತಃ ಪರೀಕ್ಷಿಸಲೆಂದು ಕುಷ್ಠರೋಗಿಯಾದ ಯತಿಯಂತೆ ವೇಷಾಂತರಗೊಂಡು ರೌರವಪುರಕ್ಕೆ ಬಂದನು. ಪಟ್ಟಣದ ಬೀದಿಗಳಲ್ಲಿ ಚರಿಗೆಗೆ ಬರುತ್ತಿದ್ದಾಗ, ಜನರು ಅವನನ್ನು ಕಂಡು ತಮತಮಗೆ ತೋರಿದಂತೆ ಜುಗುಪ್ಸೆ, ಕನಿಕರ ಮೊದಲಾದ ಪ್ರತಿಕ್ರಿಯೆಗಳನ್ನು ವ್ಯಕ್ತಮಾಡತೊಡಗಿದರು. ಆದರೆ ಕೆಲವರು ಉತ್ತಮರಾದ ಶ್ರಾವಕರು, ಕುಷ್ಠರೋಗಿಯಾಗಿಯೂ ಆ ಯತಿ ಉಚಿತ ವ್ರತೋಪವಾಸ ನಿಯಮವನ್ನು ಬಿಡದೆ ಸಂಯಮದಿಂದ ವರ್ತಿಸುತ್ತಿದ್ದುದನ್ನು ನೋಡಿ ಮೆಚ್ಚುಗೆಯನ್ನೇ ವ್ಯಕ್ತಮಾಡಿದರು. ಅವರವರ ಪ್ರತಿಕ್ರಿಯೆಗೆ ಅನುಸಾರವಾಗಿ ತಾನೂ ಪ್ರತಿಕ್ರಿಯೆಯನ್ನು ವ್ಯಕ್ತಮಾಡುತ್ತಿದ್ದ ಆ ವೇಷಾಂತರದ ವಾಸವನು, ಈ ಸಂದರ್ಭದಲ್ಲಿ ತೃಪ್ತಿಯ ಭಾವದಿಂದ "ನೇರಿದರ ನೀತಿ ಸುರಲೋಕಮೆಂಬುದು ತಪ್ಪದು" ಎಂದು ಹೇಳಿ ಮುನ್ನಡೆದನು.

"ನೇರಿದರ ನೀತಿ ಸುರಲೋಕಂ" ಎಂದರೆ ಏನು? 'ನೇರಿದರ್' ಶಬ್ದದ ಕಾವ್ಯ ಪ್ರಯೋಗಗಳಿಗೆ ಕೊರತೆಯಿಲ್ಲ (ಉದಾ: ಪಂಪಭಾ. ೧೨-೬೭[2]; ಪಂಪರಾ. ೪-೧೩; ಧರ್ಮಾಮೃ. ೨-೧೦೫, ೪-೨೦೦, ೧೦-೮೯; ಶಾಂತೀಶ್ವ. ೩-೪೫ ಇ.). ಋಜುವೆಂಬರ್ಥದ 'ನೇರ್' ಧಾತುವಿನಿಂದ ನಿಷ್ಪನ್ನವಾಗುವ ಈ ಶಬ್ದಕ್ಕೆ ಶಮದ.ವೂ ಸೇರಿದಂತೆ ಪ್ರಾಚೀನ ಕನ್ನಡ ನಿಘಂಟುಗಳು ಅರ್ಥ ಹೇಳಿವೆ. ಉದಾ.ಗೆ "ಸೈದರೆಂದು ನೇರಿದರ್" (ಶಮದ. ಪ್ರಯೋಗಸಾರ, ೨೨೪); "ದಿಮ್ಮಿದರು ಸೈದರೆಂದುಂ ಗಮ್ಮನೆ ನೇರಿದರೆನಲ್ಕೆ ಪಿರಿಯರ್ ನಿರುತಂ" (ಕವಿಕಂ. ೧೫೪). ಕಾವ್ಯಪ್ರಯೋಗಗಳನ್ನು ಗಮನಿಸಿದರೆ, ನೆಟ್ಟಗಿರುವವರು, ಋಜುಮಾರ್ಗಿಗಳು, ಸದ್ವರ್ತನೆಯವರು, ಹಿರಿಯರು, ಸುಸಂಸ್ಕೃತರು, ಪರಿಣತರು ಮುಂತಾದ ಛಾಯೆಗಳಲ್ಲಿ ಅಲ್ಲಿ ಈ ಶಬ್ದದ ಅರ್ಥವಿರುವುದು ಕಾಣುತ್ತದೆ. ಇವುಗಳಲ್ಲಿ 'ಧರ್ಮಾಮೃತ'ದವೇ ಆದ "ಸುಧರ್ಮದೊಳ್ ನೇರಿದರಪ್ಪರುಂ" (೪-೨೦೦), "ಸಮ್ಯಕ್ತ್ವದೊಳಿಂತಿವರಿರ್ವರಂತೆ ನೇರಿದರೊಳರೇ"

---

2. ವಿವರಣೆ ವಿಶೇಷಾರ್ಥ ಸೂಚನೆಗಳಿಗೆ ನೋಡಿ: ಡಿ. ಎಲ್. ನರಸಿಂಹಾಚಾರ್, 'ಪಂಪಭಾರತ ದೀಪಿಕೆ' (೧೯೭೧), ಪು. ೪೫೯–೬೦.

(೧೦-೮೯) ಎಂಬ ಪ್ರಯೋಗಗಳನ್ನು ಇಲ್ಲಿ ವಿಶೇಷವಾಗಿ ಗಮನಿಸಬೇಕು. 'ನೀತಿ' ಶಬ್ದವಂತೂ ಸದ್ವರ್ತನೆ, ಸರಿದಾರಿ, ಸದಸದ್ವಿವೇಕ, ಸಮುಚಿತವರ್ತನೆ ಇತ್ಯಾದಿ ಅರ್ಥಗಳಲ್ಲಿ ಪ್ರಸಿದ್ಧವೇ ಇದೆ.

ಇವನ್ನು ಗಮನಿಸಿ, "ನೇರಿದರ ನೀತಿ ಸುರಲೋಕಂ" ಎಂಬ ಲೋಕೋಕ್ತಿಗೆ "ಋಜುಮಾರ್ಗಿಗಳ ಸಮುಚಿತ ವರ್ತನೆಯೇ ಸುರಲೋಕ" ಎಂದೋ "ಋಜುಮಾರ್ಗಿಗಳ ಸಮುಚಿತವರ್ತನೆ ಸುರಲೋಕ(ಪ್ರಾಪ್ತಿ) ತಾನೇ?" ಎಂದೋ ಅರ್ಥ ಹೇಳುವುದು ಶಕ್ಯವಿದೆ. 'ಆದಿಪುರಾಣ' ಮತ್ತು 'ಧರ್ಮಾಮೃತ' ಈ ಎರಡೂ ಜೈನಕಾವ್ಯಗಳ ಕಥಾಸಂದರ್ಭಗಳನ್ನು ಕಣ್ಣಿಟ್ಟು ನೋಡಿದರೆ, ಎರಡನೆಯ ಅರ್ಥ ಹೆಚ್ಚು ಗ್ರಾಹ್ಯವಾಗುವಂತೆ ತೋರುವುದು. ಆದಿಪುರಾಣದಲ್ಲಿ ಶಾರ್ದೂಲ ವರಾಹಾದಿ ತಿರ್ಯಗ್ಯೋನಿಭವ ಜೀವರು ಜಾತಿಸ್ಮರರಾಗಿ ಉತ್ತರೋತ್ತರ ಭವಗಳಲ್ಲಿ ಉತ್ತಮ ಜೀವರಾಗಿ ಹುಟ್ಟಿ, ಕೊನೆಗೆ ಆದಿನಾಥನ ಪುತ್ರರಾಗುವ ಮೊದಲು ಎಂಟನೆಯ ಭವದ ಒಂದು ಘಟ್ಟದಲ್ಲಿ, ಅಚ್ಯುತಕಲ್ಪದಲ್ಲಿ ಸಾಮಾನಿಕದೇವರಾಗಿ ಜನಿಸಿದರು. ಇದು ಸುರಲೋಕಪ್ರಾಪ್ತಿಯ ಘಟ್ಟ. 'ಧರ್ಮಾಮೃತ'ದಲ್ಲಿ ವೇಷಾಂತರದ ವಾಸವನು ತನ್ನನ್ನು ಮೆಚ್ಚಿಕೊಂಡ ಕೆಲವರನ್ನು ನೋಡಿ ಒಮ್ಮೆ, "ದೇವಗತಿಗೆ ಸಲ್ವಂತಪ್ಪೀ ಲಘುಕರ್ಮಿಗಳ್ಗೀ ವಚನಮೆ ಬರ್ಕುಂ" ಎಂದೂ ಇನ್ನೊಮ್ಮೆ "ನೇರಿದರ ನೀತಿ ಸುರಲೋಕವೆಂಬುದು ತಪ್ಪದು" ಎಂದೂ (೪.೮೭–೮೯) ಪ್ರತಿಕ್ರಿಯೆ ವ್ಯಕ್ತಮಾಡಿದನೆಂದಿದೆ. ಕರ್ಮಗಳ ಹೊರೆಯನ್ನಿಳಿಸಿದವರು, ಇಳಿಸಲು ಸಾಧ್ಯವಾದವರು ಋಜುಮಾರ್ಗಿಗಳು ತಾನೇ? ಅವರು ದೇವತೆಗಳ ಲೋಕವನ್ನು ತಮ್ಮ ಸನ್ನಡತೆಯಿಂದ ಬಯಸುವುದೂ ಪಡೆಯುವುದೂ ಸಹಜವೇ. ಅದೇ ಅವರ ನೀತಿ.

ಈ ಹಿನ್ನೆಲೆಯಲ್ಲಿ 'ಆದಿಪುರಾಣ'ದ ೬–೧೩ರ ತ್ರಿಪದಿಯನ್ನು ತಾತ್ಕಾಲಿಕವಾಗಿ ಹೀಗೆ ಪರಿಷ್ಕರಿಸಿ ಬರೆಯಬಹುದು :

ವರದತ್ತಂ ಮೊದಲಾಗೆ ಧರಣೀಶರವರ್ಗೆಲ್ಲಂ
ಸುರಲೋಕಂ ಸುವಿಧಿಯೊಡನಾದುದಂತುಟೆ
ನೇ[ರಿ]ದರ ನೀತಿ ಸುರಲೋಕಂ ॥

ಹಸ್ತಪ್ರತಿಯ ಆಧಾರವಿದ್ದು, ಕ್ವಚಿತ್ತಾಗಿ ಹೊರತು ಪರಿಷ್ಕರಣಗಳಲ್ಲಿ ಸಾಮಾನ್ಯವಾಗಿ ಸರಿಯೆಂದು ಗ್ರಹಿಸಿರುವ "ನೆರೆದರನಿತೀ" ಎಂಬ ಪಾದಭಾಗವನ್ನೀಗ ನೋಡೋಣ. ಇಲ್ಲಿಯ ಲಿಪಿಕಾರ ಸ್ಖಾಲಿತ್ಯಗಳನ್ನೂ ಸಂಪಾದಕೀಯ ಭ್ರಾಂತಿಗಳನ್ನೂ ಹೀಗೆ ನಿರೂಪಿಸಬಹುದು: ಹಸ್ತಪ್ರತಿಗಳಲ್ಲಿಯ ದೀರ್ಘಸ್ವರಚಿಹ್ನೆಯ ಅಭಾವದಿಂದಾಗಿ ನೇ > ನೆ, ನೀ > ನಿ ಆಗಿವೆ; ಹಾಗೆಯೇ ಇತ್ವ–ಎತ್ವ ಚಿಹ್ನೆಗಳ ಭ್ರಾಂತಿಯಿಂದಾಗಿ ರಿ > ರೆ ಆಗಿದೆ; ಅನಿತು (+ ಈ) ಎಂಬ ಪ್ರಮಾಣವಾಚಕವನ್ನು ಪಡೆಯುವುದಕ್ಕೆಂದು ತಿ > ತೀ ಮಾಡಿಕೊಂಡಿದೆ. ಈ ದೋಷಗಳ ಜೊತೆಗೆ ಪದಚ್ಛೇದದೋಷ ಸಹ ಸೇರಿ ನೇರಿದರ ನೀತಿ > ನೆರೆದರನಿತೀ ಆಗಿದೆ.

ಇಷ್ಟು ವಿಸ್ತಾರದಲ್ಲಿ ‘ಧರ್ಮಾಮೃತ’ದ ಒಂದು ಬಾಹ್ಯಸಾಕ್ಷ್ಯವನ್ನು ಅವಲಂಬಿಸಿ, ‘ಆದಿಪುರಾಣ’ದ ಉಕ್ತತ್ರಿಪದಿಯ ಪಾಠವನ್ನು ನಾವು ಮೇಲಿನಂತೆ ಪರಿಷ್ಕರಿಸಿದರೂ ಛಂದಸ್ಸಿನ ದೃಷ್ಟಿಯಿಂದ ಈ ಪರಿಷ್ಕರಣ ದೋಷಯುಕ್ತವಾಗಿದೆ ಎಂದು ಹೇಳದೆ ವಿಧಿಯಿಲ್ಲ. ಪರಿಷ್ಕೃತ ಪದ್ಯಪಾಠದಲ್ಲಿ ಕೊನೆಯ ಪಾದ ವಿ.ಬ್ರ.ವಿ. ಎಂದು ಇರಬೇಕಾದ್ದು ರು.ಬ್ರ.ವಿ. ಎಂದಿದ್ದು, ಇಂತಹ ಗಣಪರ್ಯಾಯ ಅಂಶ ಛಂದಸ್ಸಿನಲ್ಲಿ ಸಾಧ್ಯ ಎಂದು ಒಪ್ಪಿದರೂ ಪ್ರಾಸನಿಯಮದಲ್ಲಿ ಇಲ್ಲಿಯ ಪರಿಕ್ರಮ ಗ್ರಾಹ್ಯ ಎನ್ನುವಂತಿಲ್ಲ. ಪ್ರಾಸಾಕ್ಷರದ ಪೂರ್ವಸ್ವರ ಮೊದಲೆರಡು ಪಾದಗಳಲ್ಲಿ ಹ್ರಸ್ವವಾಗಿದ್ದು, ಮೂರನೆಯದರಲ್ಲಿ ದೀರ್ಘವಾಗಿರುವುದು ಸಮರ್ಥನೀಯವಲ್ಲ[3]. ಒಂದು ಪಕ್ಷ ಪ್ರಾಸಾಕ್ಷರ ಸಂಯುಕ್ತವೋ ಬಿಂದುಪೂರ್ವವೋ ಆಗಿದ್ದರೆ, ಈ ಪರಿಕ್ರಮವನ್ನು ಸಮರ್ಥಿಸಲು ಸಾಧ್ಯವಾಗುತ್ತಿದ್ದಿತು. ಈಗ ಅಸಂಯುಕ್ತವೂ ಅಬಿಂದುಪೂರ್ವವೂ ಆಗಿರುವ ಸನ್ನಿವೇಶದಲ್ಲಿ ಅದು ಸಾಧ್ಯವಾಗದು.

ಛಂದಸ್ಸಿನ ದೃಷ್ಟಿಯಿಂದಲೂ ಈ ಪರಿಷ್ಕರಣವನ್ನು ಪ್ರಶ್ನಾತೀತವಾಗಿ ಮಾಡುವುದು ಹೇಗೆ? ಈ ಸ್ಥಿತಿಯಲ್ಲಿ ಜನ್ನನ ‘ಅನಂತನಾಥ ಪುರಾಣ’ದ (೧-೩೦) ಈ ಕಾವ್ಯಭಾಗ ನಮ್ಮ ನೆರವಿಗೆ ಬರುವುದಲ್ಲದೆ,[4] ನಮ್ಮ ವಿಚಾರದ ದಿಕ್ಕನ್ನೇ ಬದಲಾಯಿಸುತ್ತದೆ; ಸಮಸ್ಯೆಯನ್ನೂ ಬಿಡಿಸುತ್ತದೆ:

ಅಂತೇೞಿದ ಶಿಬಿಕಾಪುರೋಭಾಗದೊಳ್ ಪರಿನಿಷ್ಕ್ರಮಣಪಾಥವಾಗಪುನ ಸುಮನೋಮಂಜರಿತ ಲತಾಪ್ರತಾನದಂತೆ ಕೆಯ್ಗೆಯ್ದು ವಿಲಾಸಮೆಸೆಯೆ ವಸುಧಾತಲಪಾರಿಜಾತನ ಮುಂದೆ ಬಂದು

ಎರಡೊಡಲೊಂದೆ ಜೀವನೆನೆ ಸಂಸೃತಿಸೌಖ್ಯಮನೂಡಿದ್ಯೆ ದಿಟಂ
ನೆರೆದರ ನೀತಿಯಲ್ತೆ ಸುರಲೋಕಸುಖಂ ಬೞಿ[ಕೆಂ]ತಿಳೇಶ ಪಿಂ
ತಿರಿಸುವೆ ಮೆಯ್ಯ ಪಿಂತೆ ನೆೞಲಿರ್ಪುದೆ ಬಾರದೆ ಮಾಣೆವೆಂದು ಪೂ
ಣ್ದರಸಿಯರೇೞಿದರ್ ನೃಪನ ಕೂಡೆ ಪಲರ್ ಪಿರಿಯುಂದಣಂಗಳಂ ॥
(ಆಶ್ವಾಸ ೪. ೧೬-೨)

---

3. ಪಂಪನ ಎರಡೂ ಕಾವ್ಯಗಳಲ್ಲಿ ಒಂದೇ ಒಂದು ಉದಾಹರಣೆಯೂ ನನ್ನ ಗಮನಕ್ಕೆ ಬರಲಿಲ್ಲ; ಪೊನ್ನ ರನ್ನರ ರಚನೆಗಳಲ್ಲಿ ಸಹ ಇರುವಂತೆ ತೋರಲಿಲ್ಲ. ಆದರೆ ಅಪವಾದದ ಸಾಧ್ಯತೆಯುಂಟು ಎನ್ನುವುದಕ್ಕೆ ನಯಸೇನನ ‘ಧರ್ಮಾಮೃತ’ದ (೧೧೧೨) ಒಂದು ಕಂದಪದ್ಯದಲ್ಲಿ (೩-೧೩೦) ಇದು ಗೋಚರಿಸಿತು. ಸಂಪಾದಿತಪಾಠ ಸರಿಯಾಗಿದ್ದರೆ, ಸು. ೮೦೦ ರ ಹುಂಚದ ಶಾಸನದ ತ್ರಿಪದಿಯೊಂದರಲ್ಲಿಯೂ ಇದನ್ನು “[ಮೋನ]ಮುಂ” ಎಂಬ ಮೊದಲ ಗಣದಲ್ಲಿ ಕಾಣಬಹುದು. ಆದರೆ ತೀರ ವಿರಳವಾದ ಅಪವಾದಲಕ್ಷ್ಯಗಳನ್ನು ಗಮನಿಸಿ ದೋಷಯುಕ್ತ ಅಥವಾ ಸಂದೇಹಗ್ರಸ್ತಪಾಠವನ್ನು ಪುನರ್ರಚಿಸುವುದು ಯುಕ್ತವಲ್ಲ ಎಂದೇ ಹೇಳಬೇಕಾಗಿದೆ.

4. ಈ ಅಮೂಲ್ಯವಾದ ಪ್ರಯೋಗದ ಕಡೆಗೆ ನನ್ನ ಲಕ್ಷ್ಯವನ್ನು ಸೆಳೆದವರು ಡಾ॥ ಎಂ. ಚಿದಾನಂದ ಮೂರ್ತಿಗಳು. ಅವರ ಉಪಕಾರಕ್ಕೆ ನನ್ನ ಕೃತಜ್ಞತೆಗಳು.

ಅರಿಷ್ಟಪುರದ ಅರಸು ಪದ್ಮರಥನು ಉಲ್ಕಾಪಾತವನ್ನು ಕಂಡು, ಮಗನಿಗೆ ಪಟ್ಟಕಟ್ಟಿ, ರಾಜ್ಯಕೋಶಗಳನ್ನು ತ್ಯಜಿಸಿ, ಜಿನದೀಕ್ಷೆಗೆಂದು ಸ್ವಯಂಪ್ರಭ ಯತಿಗಳ ಆಶ್ರಮಕ್ಕೆ ತೆರಳಿದನೆಂದೂ ಆಗ ಆತನ ರಾಣಿಯರೂ ಆತನನ್ನು ಬಿಡದೆ ಹಿಂಬಾಲಿಸಿದ ರೆಂದೂ ಕವಿ ನಿರೂಪಿಸುವಾಗ ಮೇಲಿನ ಕೃತಿಭಾಗ ಬಂದಿದೆ. ಮುಖ್ಯವಾಗಿ ಪದ್ಯದ ಅಭಿಪ್ರಾಯ ಹೀಗೆ: "ಇಲ್ಲಿಯವರೆಗೆ ಶರೀರ ಎರಡು, ಜೀವ ಒಂದೇ ಎನ್ನುವಂತೆ ಸಂಸಾರಸೌಖ್ಯವನ್ನು ನಮಗೆ ಉಣಿಸಿದ್ದೀಯೆ; ನಿಜವೇ; ನೆರೆದವರ ನೀತಿಯಲ್ಲವೇ ಸುರಲೋಕಸುಖ? ಈಗಿನ್ನು ನಮ್ಮನ್ನು ಮಾತ್ರ ಹೇಗೆ ಹಿಂದೆ ಬಿಟ್ಟು ನೀನೊಬ್ಬನೇ ಹೋಗುತ್ತೀಯೆ? ಶರೀರವನ್ನು ಬಿಟ್ಟು ನೆರಳು ಇರುತ್ತದೆಯೇ? ನಾವು ಕೂಡ ನಿನ್ನೊಂದಿಗೆ ಬಾರದೆ ಇರುವುದಿಲ್ಲ." ಹೀಗೆ ಸಂಕಲ್ಪಮಾಡಿ ಹಲವರು ಅರಸಿಯರು ಸಹ ಅರಸನ ಜೊತೆಯಲ್ಲಿಯೇ ದೊಡ್ಡ ಪಲ್ಲಕ್ಕಿಗಳನ್ನು ಹತ್ತಿದರು.

ಇಲ್ಲಿ "ನೆರೆದವರ ನೀತಿಯಲ್ತೆ ಸುರಲೋಕಸುಖಂ" ಎಂಬ ಮಾತಿಗೆ ಅರ್ಥವೇನು? "ನೆರೆ-ಸಂಯೋಗೇ ಪಾರ್ಶ್ವೇ ಚ" ಎಂಬುದು ಶಮದ.ದ ಧಾತುಪಾಠ. 'ನೆರೆದರ್' ಎಂಬ ಕೃನ್ನಾಮದ ಅರ್ಥ 'ಕೂಡಿದವರು' ಇಲ್ಲವೆ 'ಒಟ್ಟಿಗೆ ಇರುವವರು' ಎಂದಾಗು ವುದು. 'ನೆರೆ'ಗೆ ಇರುವ 'ಪಾರ್ಶ್ವ'ವೆಂಬ ಇನ್ನೊಂದು ಅರ್ಥ ನಾಮಾರ್ಥಕವಾದ್ದು ಎನ್ನುವುದರಿಂದ ಇಲ್ಲಿಗೆ ಅದು ಪ್ರಸ್ತುತವಲ್ಲ. 'ಕೂಡಿದವರು' ಎಂಬ ಅರ್ಥವನ್ನು 'ಒಟ್ಟಿಗೆ ಬದುಕುತ್ತಿರುವವರು', 'ಭವಾನುಬಂಧಿ ಜೀವರು' ಮುಂತಾಗಿ ಹಿಗ್ಗಿಸುವುದು ಸಾಧ್ಯವಿದೆ. ಅದನ್ನು ಅವಲಂಬಿಸಿ, "ಒಟ್ಟಿಗೆ ಬಾಳಿ ಬದುಕಿ, ಕರ್ಮವನ್ನಾಚರಿಸಿ, ಎಲ್ಲ ಜೀವರ ಗಮ್ಯಸ್ಥಾನವಾದ ಅಥವಾ ಹೆಚ್ಚಿನ ಸುಖಸ್ಥಾನವಾದ ಸುರಲೋಕ ವನ್ನು ಸೇರಿ ಅಲ್ಲಿಯೂ ಒಟ್ಟಾಗಿ ಸುಖಾನುಭವವನ್ನು ಪಡೆಯುವುದೇ ತಕ್ಕ ನೀತಿ (ಆಚರಣೆ, ನಡವಳಿಕೆ, ವರ್ತನೆ) ಯಲ್ಲವೇ?" ಎಂದು ಚರ್ಚೆಯ ಉಕ್ತಿಯನ್ನು ಅರ್ಥಮಾಡಿಕೊಳ್ಳಬಹುದು. ಪದ್ಮರಥನ ರಾಣಿಯರ ಈ ಅಪೇಕ್ಷೆ ಸಹಜವಾಗಿಯೇ ಇದೆ. ಇದರೊಂದಿಗೆ 'ಆದಿಪುರಾಣ'ದ ಉಕ್ತ ತ್ರಿಪದಿಯ ಕಥಾಸಂದರ್ಭವನ್ನು ಹೋಲಿಸಿ ನೋಡಬಹುದು. ಹಾಗೆ ನೋಡಿದಾಗ, "ನೆರೆದವರ ನೀತಿ ಸುರಲೋಕಂ" ಎಂಬ ಮಾತು ಅಲ್ಲಿ ತೃಪ್ತಿಕರವಾಗಿ ಹೊಂದಿಕೊಳ್ಳುತ್ತದೆ. ಅದು ಹೀಗೆ:

> ವರದತ್ತಂ ಮೊದಲಾಗೆ ಧರಣೀಶರವರ್ಗೆಲ್ಲಂ
> ಸುರಲೋಕಂ ಸುವಿಧಿಯೊಡನಾದುದಂತುಟೆ
> ನೆರೆದರ ನೀತಿ ಸುರಲೋಕಂ ‖

ಈ ಪದ್ಯವನ್ನು ಅರ್ಥದ ದೃಷ್ಟಿಯಿಂದ ಹೀಗೆ ಮೂರು ಭಾಗಗಳಾಗಿ ವಿಭಜಿಸ ಬಹುದು: i) ವರದತ್ತಂ ಮೊದಲಾಗೆ ಧರಣೀಶರವರ್ಗೆಲ್ಲಂ ಸುರಲೋಕಂ ಸುವಿಧಿ ಯೊಡನಾದುದು; ii) ಅಂತುಟೆ; iii) ನೆರೆದರ ನೀತಿ ಸುರಲೋಕಂ.

ಈ ವಿಭಜನೆಗೊಂಡ ಭಾಗಗಳಿಗೆ ಹೀಗೆ ಅರ್ಥ ಹೇಳಬಹುದು: i) ವರದತ್ತ ಮೊದಲಾಗಿ ಆ ರಾಜರಿಗೆಲ್ಲ ಸುವಿಧಿಯೊಂದಿಗೆ ಸುರಲೋಕ (ಪ್ರಾಪ್ತ) ವಾಯಿತು;

ii) (ಅದು) ಹಾಗೆಯೇ (ಸರಿ); iii) ಕೂಡಿದವರ ನಡೆವಳಿಕೆ ಸುರಲೋಕವೇ (ಸುರಲೋಕವನ್ನು ಸೇರಿ ಒಟ್ಟಿಗೆ ಅಲ್ಲಿಯ ಸೌಖ್ಯವನ್ನು ಅನುಭವಿಸುವುದೇ.)

ಸುವಿಧಿ ರಾಜನು ಅಚ್ಯುತಕಲ್ಪದಲ್ಲಿ ಅಚ್ಯುತೇಂದ್ರನಾದನು. ಅವನ ಭವಾನುಬಂಧಿ ಜೀವರಾದ ವರದತ್ತ ಮೊದಲಾದವರೂ ಅದೇ ಸ್ವರ್ಗಕ್ಕೆ ಹೋಗಿ ಅಲ್ಲಿ ಸಾಮಾನಿಕ ದೇವರಾದರು. ಅದು ಹಾಗೆ ತಾನೆ ಆಗಬೇಕು? ಭವಭವಗಳಲ್ಲಿ ಒಂದಾಗಿ ಕೂಡಿ ಬಾಳಿದವರು ಈಗ ಜೊತೆಯಾಗಿಯೇ ಸುರಲೋಕವನ್ನು ಹೋಗಿ ಸೇರಿ ಸುಖಾನುಭವಮಾಡುವುದು ಸಹಜವೇ ಆಗಿದೆ.

ಈ ಪುಟ್ಟ ಪದ್ಯದ ಕೊನೆಯ ಪಾದ ಅರ್ಥಾಂತರನ್ಯಾಸವೆಂಬ ಅಲಂಕಾರ ದಲ್ಲಿದ್ದು, ತ್ವರಿತಗತಿಯ ಸರಳ ಕಥಾಂಶಕ್ಕೆ ಸಹಜ ಸುಂದರವಾದ ಮುಕ್ತಾಯವನ್ನು ಅಲ್ಲಿ ಕಾಣಬಹುದಾಗಿದೆ. ವಾಸ್ತವವಾಗಿ ಈ ಅಲಂಕಾರಕ್ಕೆ ಕವಿ ಒಂದು ಲೋಕೋಕ್ತಿಯನ್ನೇ ಬಳಸಿದ್ದಾನೆ. ಬಾಹ್ಯಸಾಕ್ಷ್ಯದ ಬೆಂಬಲ, ಅಂತಸ್ಸಂಭಾವ್ಯತೆ ಲಿಪಿಕಾರಲೇಖನ ಸಂಭಾವ್ಯತೆಗಳ ಅವಲಂಬನದಿಂದ ಈ ಕೊನೆಯ ಪರಿಷ್ಕರಣದ ಸಾಧುತ್ವವನ್ನು ಒಪ್ಪಬಹುದಾಗಿದೆ.

"ನೆರೆದರ ನೀತಿ ಸುರಲೋಕಂ" ಎಂಬ ಪರಿಷ್ಕರಣ "ನೇರಿದರ ನೀತಿ ಸುರ ಲೋಕಂ" ಎಂಬ ಪರಿಷ್ಕರಣ ಒಡ್ಡಿದ್ದ ಛಂದಸ್ಸಿನ ಸಮಸ್ಯೆಯನ್ನು ಪರಿಹರಿಸುತ್ತದೆ; ಪ್ರಾಸನಿಯಮದ ಉಲ್ಲಂಘನೆ ತಪ್ಪಿ, ಪರ್ಯಾಯಗಣ ಸ್ವೀಕಾರವೂ ಅನಾವಶ್ಯಕ ವಾಗುತ್ತದೆ. ಅಲ್ಲದೆ, ಉಕ್ತ ತ್ರಿಪದಿಯ ಪಾಠಾಂತರಗಳಲ್ಲಿ 'ನೆರೆದರ' ಎಂಬುದನ್ನು ಪೋಷಿಸುವ ಲಿಖಿತಗಳೇ ಅಧಿಕವಾಗಿದ್ದು, ಮೂರು ಪರಿಷ್ಕರಣಗಳ ಸಂಪಾದಕರೂ ಅದನ್ನೇ ಅಂಗೀಕರಿಸಿದ್ದು, 'ನೇರಿದರ' ಎಂಬುದನ್ನು ಪೋಷಿಸುವ ಲಿಖಿತಗಳಿಗೆ ಪ್ರತಿಗಳಲ್ಲಿ ಯಾವ ಆಧಾರಗಳೂ ತೋರುತ್ತಿಲ್ಲ ಎನ್ನುವುದನ್ನೂ ಗಮನಿಸಬೇಕಾಗಿದೆ. ಮೊದಲೆರಡು ಪಾದಗಳಲ್ಲಿ ಕ್ವಚಿತ್ತಾಗಿ ದೊರೆಯುವ ಪಾಠಭೇದಗಳನ್ನು ಭಿನ್ನಾರ್ಥಕ ಶಬ್ದಪ್ರತಿನಿಧಾನಗಳೆಂದು ಉಪೇಕ್ಷಿಸಬಹುದು.

'ಆದಿಪುರಾಣ' 'ಅನಂತನಾಥಪುರಾಣ'ಗಳ ಹಾಗೆಯೇ 'ಧರ್ಮಾಮೃತ'ದ ಲೋಕೋಕ್ತಿಯಲ್ಲಿಯೂ ಕವಿಪಾಠ ಮೂಲತಃ ಇದ್ದು, ಅನಂತರದಲ್ಲಿ ಲಿಪಿಕಾರರ ಕೈವಾಡದಿಂದ ಅದು ಈಗಿರುವಂತೆ ಮಾರ್ಪಟ್ಟಿರಬಹುದು. ಹಸ್ತಪ್ರತಿಗಳನ್ನು ಪರಿಶೀಲಿಸಿ ಈ ವಿಷಯವನ್ನು ನಿಷ್ಕರ್ಷಿಸಬೇಕಾಗುತ್ತದೆ. ಆದರೆ ಕಥಾಸಂದರ್ಭಕ್ಕೆ ಇಲ್ಲಿ ಈ ಲೋಕೋಕ್ತಿಯ ಆಶಯ ಕೂಡಲೇ ಸ್ಪಷ್ಟವಾಗುವುದಿಲ್ಲ. ಅದರ ಆಶಯ 'ಆದಿಪುರಾಣ' 'ಅನಂತನಾಥಪುರಾಣ'ಗಳಲ್ಲಿ ತೋರುವುದಕ್ಕಿಂತ ವ್ಯಾಪಕವಾಗಿ ಇದ್ದಿರುವುದೂ ಸಾಧ್ಯ. ○

# ದೇವಸೇನಗಣಿ ಮತ್ತು ವಡ್ಡಾರಾಧನೆ

—ಹಂ. ಪ. ನಾಗರಾಜಯ್ಯ

ವಡ್ಡಾರಾಧನೆಯ (= ವಡ್ಡಾ) ಕಾಲನಿರ್ಣಯ ಸಂಬಂಧದಲ್ಲಿ ಹೊಸ ತಿರುವು ಕೊಟ್ಟಿರುವ ಆಧಾರಗಳಲ್ಲಿ ದೇವಸೇನನ ಗಾಹೆಯೂ ಒಂದು. ಆಚಾರ್ಯ ದೇವಸೇನನ ವಿಚಾರವಾಗಿ ಕೆಲವು ಮಾಹಿತಿ ಹಾಗೂ ಒಂದು ಸಂಗ್ರಹ ಪರಿಚಯ ಕೊಡುವುದು ಈ ಲೇಖನದ ಉದ್ದೇಶ. ಜೈನ ಆಚಾರ್ಯರ ಕಾಲನಿರ್ಧಾರ ಹಾಗೂ ವ್ಯಕ್ತಿನಿರ್ದೇಶನಕ್ಕೆ ಇರುವ ಮೊದಲ ತೊಡಕು ಒಂದೇ ಹೆಸರಿನವರು ಒಬ್ಬರಿಗಿಂತ ಹೆಚ್ಚು ಜನರಿರುವುದು. ಅದರಂತೆ ದೇವಸೇನ ಎಂಬ ಹೆಸರಿನ ಕೆಲವು ಆಚಾರ್ಯರಿದ್ದಾರೆ. ಅವರಲ್ಲಿ ಪ್ರಸ್ತುತ 'ವಡ್ಡಾರಾಧನೆ' ಸಂಬಂಧವಾಗಿ ಪ್ರಸ್ತಾಪಿಸುವ ದೇವಸೇನನು ಕನ್ನಡದ ಆದಿಕವಿ ಪಂಪನ ಸಮಕಾಲೀನ ಲೇಖಕ. ದೇವಸೇನನ ಕೃತಿಗಳು:

(ಅ) ದರ್ಶನಸಾರ, (ಆ) ಆಲಾಪ ಪದ್ಧತಿ, (ಇ) ಲಘುನಯ ಚಕ್ರ (ನಯ ಲಕ್ಷಣ), (ಈ) ಆರಾಧನಸಾರ, (ಉ) ತತ್ವಸಾರ, (ಊ) ಭಾವಸಂಗ್ರಹ.

ದೇವಸೇನನ ಶಿಷ್ಯ ಮಾಯಿಲ್ಲಧವಳನೂ ಲೇಖಕನಾಗಿದ್ದು ಆತ ಬರೆದ "ದ್ರವ್ಯ ಸ್ವಭಾವ ಪ್ರಕಾಶ" ಪ್ರಸಿದ್ಧಿ ಪಡೆದಿದೆ. ದೇವಸೇನ ತನ್ನ ಕೃತಿ 'ದರ್ಶನಸಾರ'ದ ಕಡೆಯಲ್ಲಿ ಬರೆದ ಪ್ರಶಸ್ತಿರೂಪದ ಎರಡು ಗಾಹೆಗಳು:

ಪುವ್ವಾಯರಿಯ ಕಯಾಇಂ ಗಾಹಾಇಂ ಸಂಚಿಊಣ ಏಯತ್ಥ
ಸಿರಿದೇವಸೇಣಗಣಿಣಾ ಧಾರಾಏ ಸಂವಸಂತೇಣ ॥
ರಇಓ ದಂಸಣಸಾರೋ ಹಾರೋ ಭವ್ವಾಣ ಣವಸ ಏ ಣವ ಏ
ಸಿರಿ ಪಾಸಣಾಹ ಗೇಹೇ ಸುವಿಸುದ್ಧೇ ಮಾಹಸುದ್ಧ ದಸಮೀಏ ॥

(ಶ್ರೀ ದೇವಸೇನ ಗಣಿಯು ಪೂರ್ವಾಚಾರ್ಯ ಕಥಿತ ಗಾಹೆಗಳನ್ನು ಸಂಚಯಿಸಿ ಏಕತ್ರಗೊಳಿಸಿ ವಿಕ್ರಮ ಸಂವತ್ 990ರ ಮಾಘ ಶುಕ್ಲ ದಶಮಿಯಂದು ಧಾರಾನಗರ ದಲ್ಲಿ ವಾಸವಾಗಿರುವಾಗ ಶ್ರೀ ಪಾರ್ಶ್ವನಾಥ ಮಂದಿರದಲ್ಲಿ ಭವ್ಯಜೀವಿಗಳ ಹೃದಯದ ಹಾರದಂತೆ ಶೋಭಿಸುವ 'ದರ್ಶನಸಾರ' ಹೆಸರಿನ ಕೃತಿಯನ್ನು ಬರೆದನು). ದೇವ ಸೇನನ ಕೃತಿ ರಚನೆಯಾದದ್ದು ವಿಕ್ರಮ ಸಂವತ್ 990, ಅಂದರೆ ಕ್ರಿ. ಶ. 933; ಇದು ಕನ್ನಡದ ಆದಿಕವಿ ಪಂಪ ತನ್ನ 'ಆದಿಪುರಾಣ' ರಚಿಸಿದ ಕಾಲ.

ಪಂಡಿತ ಪರಮಾನಂದಜಿ ಶಾಸ್ತ್ರಿಯವರು 'ಅನೇಕಾಂತ' ಪತ್ರಿಕೆಯಲ್ಲಿ (7-11, 12) ಬರೆದ ಲೇಖನದಲ್ಲಿ 'ದರ್ಶನಸಾರ' ಮತ್ತು 'ಭಾವಸಂಗ್ರಹ' ಗ್ರಂಥ ಗಳ ಕರ್ತೃ ಒಬ್ಬನೇ ಎಂಬುದನ್ನು ಒಪ್ಪದೆ ಆಂತರಿಕ ಕಾರಣಗಳಿಂದ ಅವೆರಡೂ ಭಿನ್ನ ಕರ್ತೃವಿನ ಕೃತಿಗಳೆಂದು ಪ್ರತಿಪಾದಿಸಿದ್ದಾರೆ. ಈ ಎರಡೂ ಗ್ರಂಥಗಳ ಲೇಖಕರ

ಹೆಸರು ದೇವಸೇನ ಮತ್ತು ಇಬ್ಬರ ಗುರುಗಳ ಹೆಸರೂ ವಿಮಲಸೇನಗಣಿ ಎಂದೇ ಆಗಿದೆ. 'ಭಾವಸಂಗ್ರಹ'ದ ದೇವಸೇನನು 1193ರಲ್ಲಿ (?) 'ಸುಲೋಚನಾ ಚರಿಉ' ಬರೆದ ಎರಡನೆಯ ದೇವಸೇನ. ಪಂಡಿತ ನಾಥೂರಾಮ ಪ್ರೇಮಾಜಿಯವರು ಈ ಅಭಿಪ್ರಾಯವನ್ನು ಬಹುಮಟ್ಟಿಗೆ ಮಾನ್ಯ ಮಾಡಿದ್ದಾರೆ (ಜೈನ ಸಾಹಿತ್ಯ ಔರ ಇತಿಹಾಸ, ಎರಡನೆಯ ಮುದ್ರಣ, ಪುಟ 176). ಆದರೆ ಜುಗಲಕಿಶೋರ ಮುಖ್ತಾರರು 'ಪುರಾತನ ವಾಕ್ಯ ಸೂಚಿ'ಯ ಪ್ರಸ್ತಾವನೆಯಲ್ಲಿ (ಪುಟ 16) ಈ ಅಭಿಪ್ರಾಯವನ್ನು ವಿರೋಧಿಸಿ 'ಭಾವಸಂಗ್ರಹ'—'ದರ್ಶನ ಸಾರ' ಕೃತಿಗಳ ಏಕ ಕರ್ತೃತ್ವವನ್ನು ಎತ್ತಿಹಿಡಿದಿದ್ದಾರೆ ; ಸ್ವರ್ಗೀಯ ಡಾ|| ನೇಮಿಚಂದ್ರಶಾಸ್ತ್ರಿಯವರೂ ಇದನ್ನೇ ಅನುಮೋದಿಸಿ 'ಭಾವ ಸಂಗ್ರಹ' ವಿಕ್ರಮ ಸಂವತ್ 1005ರಲ್ಲಿ (953) ರಚಿತವಾಗಿರಬಹುದೆಂದಿದ್ದಾರೆ (ತೀ. ಮ. ಮತ್ತು ಉನಕೀ ಆಚಾರ್ಯ ಪರಂಪರಾ, ಭಾಗ 2, ಪುಟ 369). ದೇವಸೇನಗಣಿ 'ಆರಾಧನಾ ಸಾರ'ದ ಪ್ರಶಸ್ತಿ ಪದ್ಯವೊಂದರಲ್ಲಿ ಹೀಗೆ ನಿವೇದಿಸಿಕೊಂಡಿದ್ದಾನೆ:

ಣಯಮೋ ಅತ್ಥಿ ಕವಿತ್ತಂ ಣ ಮುಣಾಮೋ ಛಂದ ಲಕ್ಖಣಂ ಕಿಂ ಪಿ
ಣಿಯಭಾವಣ್ಣಾ ಮಿತ್ತಂ ರಇಯಂ ಆರಾಹಣಾ ಸಾರಂ || 114
ಅಮುಣಿಯಕಚ್ಚೇಣ ಇಮಂ ಭಣಿಯಂ ಜಂ ಕಿಂ ಪಿ ದೇವಸೇಣೇಣ
ಸೋಹಂತು ತಂ ಮುಣಿಂದಾ ಅತ್ಥಿ ಹು ಜಇ ಪವಣಯ ವಿರುದ್ಧಂ || 115

(ನನಗೆ ಕವಿತ್ವದ ಪರಿಜ್ಞಾನವಾಗಲಿ ಛಂದಸ್ಸಿನ ವ್ಯಾಕರಣದ ಜ್ಞಾನವಾಗಲಿ ಇಲ್ಲ. ನನ್ನ ಭಾವನೆಯ ನಿಮಿತ್ತದಿಂದ 'ಆರಾಧನಾಸಾರ' ಬರೆದಿದ್ದೇನೆ. ಪೂರ್ಣತತ್ವ ಜ್ಞಾನದ ಪರಿಚಯವಿರದ ದೇವಸೇನನಿಂದ ರಚಿತವಾಗಿರುವ ಈ ಕೃತಿಯಲ್ಲಿ ಏನಾದರೂ ಆಗಮ ವಿರುದ್ಧ ಹೇಳಿಕೆಯಿದ್ದರೆ ಅದನ್ನು ಮುನೀಂದ್ರರು ಶುದ್ಧಿಗೊಳಿಸಲಿ). ಆತನ ಈ ವಿನಯದಂತೆ ಖಡಾಖಂಡಿತವಾದ ಸ್ವಭಾವವನ್ನು ನೋಡಿ:

ರೂಸಉ ತೂಸಉ ಲೋಓ ಸಚ್ಚಂ ಅಕ್ಖಂತಯಸ್ಸ ಸಾಹುಸ್ಸ
ಕಿಂ ಜೂಯ ಭ ಏ ಸಾಡೀ ವಿವಜ್ಜಿಯವ್ವಾ ಣರಿಂದೇಣ || 51

ಸತ್ಯ ನುಡಿಯುವ ಸಾಧುಗಳಿಗೆ ಯಾರೇ ಕೋಪಿಸಲಿ ಸಂತೋಷಿಸಲಿ ಅದರ ಚಿಂತೆ ಯೇಕೆ? ರಾಜನ ಹೆದರಿಕೆಯಿಂದ ವಸ್ತ್ರಧಾರಣೆಯನ್ನು ಬಿಟ್ಟುಬಿಡಬೇಕೇನು? ಎಂದಿಗೂ ಇಲ್ಲ.—ಇದು ಖಂಡಿತವಾದಿ ದೇವಸೇನನ ಸ್ಪಷ್ಟೋಕ್ತಿ.

## ದೇವಸೇನ ಗಣಿಯ ಕೃತಿಗಳ ಕಿರು ಪರಿಚಯ

**ದರ್ಶನಸಾರ:** ಪೂರ್ವಾಚಾರ್ಯಪ್ರೋಕ್ತ, ಕೇವಲ 51 ಗಾಥೆಗಳ ಸಂಕಲನವಾದ ಈ 'ದರ್ಶನಸಾರ'ದಲ್ಲಿಯ ಮೊದಲ ಗಾಹೆಯಲ್ಲಿ ಮಹಾವೀರರ ಸ್ತುತಿಯಿದೆ (ಶ್ಲೇಷೆಯಿಂದ ಸ್ವಗುರು ಸ್ತೋತ್ರವೂ ಇದರಲ್ಲಿದೆ). ಅನಂತರ ಮರೀಚಿ, ಬುದ್ಧಕೀರ್ತಿ ಮಾಡಿದ ಮಿಥ್ಯಾಮತ ಪ್ರಚಾರದ ಪ್ರಸ್ತಾಪವಿದೆ. ಆಮೇಲೆ ಶ್ವೇತಾಂಬರ,

ವಿಪರೀತ, ವಾಚನಿಕ, ಅಜ್ಞಾನ ಮತಗಳ, ದ್ರಾವಿಡ ಯಾಪನೀಯ ಕಾಷ್ಠಾ, ಮಾಥುರ ಮತ್ತು ಭಿಲ್ಲಕ ಸಂಘಗಳ ಉತ್ಪತ್ತಿ ಸಮೀಕ್ಷೆಯಿದೆ. ಕಾಷ್ಠಾ ಸಂಘದಲ್ಲಿ ವೀರಸೇನಸ್ವಾಮಿಯ ಶಿಷ್ಯ ಜಿನಸೇನ ಕುಂದಕುಂದ ಗುಣಭದ್ರ ವಿನಯಸೇನ ಕುಮಾರಸೇನರ ಹೆಸರುಗಳವೆ. ಕಾಷ್ಠಾ ಸಂಘದ ಉಪದೇಶಕ ಕುಮಾರಸೇನ, ಕಾಲ ವಿಕ್ರಮ ಸಂವತ್ 753. ಮಾಥುರ ಸಂಘದ ಉತ್ಪತ್ತಿ ರಾಮಸೇನನಿಂದ ವಿಕ್ರಮ ಸಂವತ್ 953ರಲ್ಲಿ, ಮಥುರಾ ನಗರದಲ್ಲಿ.

**ಭಾವಸಂಗ್ರಹ:** 14 ಗುಣಸ್ಥಾನಗಳನ್ನವಲಂಬಿಸಿ ವಿವಿಧ ವಿಷಯಗಳನ್ನು ನಿರೂಪಿಸುವ ಭಾವಸಂಗ್ರಹದಲ್ಲಿ 701 ಗಾಥೆಗಳಿವೆ. ಮಿಥ್ಯಾತ್ವ ಗುಣ ಸ್ಥಾನದಲ್ಲಿ ಏಕಾಂತರ, ವಿನಯ, ಸಂಶಯ, ಅಜ್ಞಾನ, ವಿಪರೀತ—ಎಂಬ ಐದು ಭೇದಗಳನ್ನು ಹೇಳಿದೆ. ಶ್ರಾದ್ಧಾದಿಗಳನ್ನು ಸೋದಾಹರಣಪೂರ್ವಕ ಖಂಡಿಸಲಾಗಿದೆ. ವೈನಯಿಕ ಮಿಥ್ಯಾತ್ವದ ನಿರಸನದಲ್ಲಿ ನಾಗ ಯಕ್ಷ ದುರ್ಗಾ ಚಂಡಿಕಾ ಮೊದಲಾದ ದೇವತೆಗಳ ಪೂಜೆಯನ್ನು ನಿಷೇಧಿಸಲಾಗಿದೆ. ಭಾವಸಂಗ್ರಹದ ಕೆಲವು ಗಾಹೆಗಳನ್ನು ನೇಮಿಚಂದ್ರ ಸಿದ್ಧಾಂತ ಚಕ್ರವರ್ತಿಯ ಪಂಚಸಂಗ್ರಹದಿಂದಲೂ, ಜೀವಕಾಂಡ (ಧವಲಾ), ಪಂಚಾಸ್ತಿಕಾಯದಿಂದಲೂ ತೆಗೆದುಕೊಳ್ಳಲಾಗಿದೆ.

**ಆರಾಧನಾಸಾರ:** 115 ಪ್ರಾಕೃತ ಗಾಥಾಗಳ ಸಂಕಲನ. ತಪಾರಾಧನೆ, ದರ್ಶನಾ ರಾಧನೆ, ಜ್ಞಾನಾರಾಧನೆ, ಚಾರಿತ್ರಾರಾಧನೆ—ನಾಲ್ಕು ಆರಾಧನೆಯ ವರ್ಣನೆಯಿದೆ. ತೀರ್ಥಂಕರ ವಾಣಿಯಿಂದ ಪ್ರತಿಪಾದಿತ 11 ಅಂಗ 14 ಪೂರ್ವಗಳನ್ನು ಅವಗತ ಮಾಡಿಕೊಳ್ಳುವುದು ಜ್ಞಾನಾರಾಧನೆ. ಭಾವಶುದ್ಧಿ ಪೂರ್ವಕವಾಗಿ 13 ಪ್ರಕಾರದ ಚಾರಿತ್ರವನ್ನು ಆಚರಿಸುವುದೇ ಚಾರಿತ್ರಾರಾಧನೆ (ಪಂಚಮಹಾವ್ರತ 5 ಪಂಚ ಸಮಿತಿ 5 ತ್ರಿಗುಪ್ತಿ 3–13). ಈ 13 ಪ್ರಕಾರದ ತಪಸ್ಸನ್ನು ಆಚರಿಸಲು ಪ್ರವೃತ್ತ ರಾಗುವುದೇ ತಪಾರಾಧನೆ.

**ಲಘುನಯಚಕ್ರ:** ಇದರಲ್ಲಿ ನಯದ ಸ್ವರೂಪ, ಭೇದ ಪ್ರಭೇದಗಳನ್ನು ವರ್ಣಿಸುವ 87 ಗಾಥೆಗಳಿವೆ. ಯಾವುದೇ ವಸ್ತುವಿನ ಒಂದು ಅಂಶವನ್ನು ಗ್ರಹಣ ಮಾಡುವುದು (ಶ್ರುತಜ್ಞಾನದ ಅಭೇದವೇ) ನಯ. ನಯದ ಹೊರತು ವಸ್ತುಸ್ವರೂಪದ ಪ್ರತಿಪತ್ತಿ ಯಾಗುವುದಿಲ್ಲ. ಆದರಿಂದ ನಯದ ಮೂಲಕವೇ ಸ್ಯಾದ್ವಾದ ಜ್ಞಾನ ದೊರೆಯು ವುದು.

**ತತ್ವಸಾರ:** ಇದರಲ್ಲಿ 74 ಗಾಥೆಗಳಿವೆ. ತತ್ವಭೇದಗಳಾದ ಸ್ವಗತ ಮತ್ತು ಪರಗತ ತತ್ವದ ಪ್ರಸ್ತಾಪವಿದೆ. ಮತ್ತಿದರ ಒಳಭೇದವಾದ ಸವಿಕಲ್ಪಕ–ನಿರ್ವಿಕಲ್ಪಕದ ವಿವರಣೆಯಿದೆ. ಇದು ಶುದ್ಧ ಆಧ್ಯಾತ್ಮಿಕ ಗ್ರಂಥ.

**ಆಲಾಪ ಪದ್ಧತಿ:** ಇದು ಸಂಸ್ಕೃತದಲ್ಲಿದೆ, ಗದ್ಯದಲ್ಲಿದೆ, ಚಿಕ್ಕದಾಗಿದೆ. ಗುಣ, ಪರ್ಯಾಯ, ಸ್ವಭಾವ, ಪ್ರಮಾಣ, ನಯ, ಗುಣ ವ್ಯುತ್ಪತ್ತಿ, ಸ್ವಭಾವ ವ್ಯುತ್ಪತ್ತಿ, ಪ್ರಮಾಣ ನಿಕ್ಷೇಪ–ಇವುಗಳನ್ನು ಇದರಲ್ಲಿನ 16 ಅಧಿಕಾರಗಳಲ್ಲಿ ವಿವರಿಸಿದೆ.

ದೇವಸೇನಗಣಿಯು ಮೇಲಿನ ಆರು ಕೃತಿಗಳಲ್ಲಿ ಒಂದಾದ 'ಲಘುನಯಚಕ್ರ'ಕ್ಕೆ ನಯಚಕ್ರ, ನಯಲಕ್ಷಣ ಎಂಬ ಇನ್ನೆರಡು ಹೆಸರುಗಳಿವೆ. ಇದರಲ್ಲಿ ಬರುವ 87 ಗಾಹೆಗಳಲ್ಲಿ ಒಂದಾದ, 83ನೆಯ ಗಾಹೆಯಾದ

ಮಜ್ಝ ಸಹಾವಂ ಣಾಣಂ ದಂಸಣಚರಣಂ ಣಕೋವಿ ಲಾವಣ್ಣಂ
ಜೋ ಸವ್ವಯಣಗ್ಗಾಹಿ ಸೋ ಹಂ ಣೋ ಗಾಹವೇಯದಾ ॥

ಎಂಬುದು ವಡ್ಡಾರಾಧನೆಯ ಸುಕೌಶಳಸ್ವಾಮಿಯ ಕಥೆಯಲ್ಲಿ (ಪು. 48) ಪ್ರಯೋಗವಾಗಿದೆ. ಈ ಗಾಹೆಯನ್ನು ದೇವಸೇನ ಗಣಿಯ ಶಿಷ್ಯನಾದ ಮಾಯಿಲ್ಲ ಧವಳನೂ ತನ್ನ 'ದ್ರವ್ಯ ಸ್ವಭಾವ ಪ್ರಕಾಶ'ದಲ್ಲಿ (ಗಾಹೆ 406) ಬಳಸಿದ್ದಾನೆ. ದೇವಸೇನನ ಕೃತಿಯಾದ 'ಭಾವಸಂಗ್ರಹ'ದಿಂದ ಕೆಲವು ಗಾಹೆಗಳನ್ನು ವಸುನಂದಿ ತನ್ನ ಉಪಾಸಕಾಧ್ಯಯನದಲ್ಲಿ (-ಶ್ರಾವಕಾಚಾರದಲ್ಲಿ) ಬಳಸಿಕೊಂಡಿದ್ದಾನೆ. ಅವುಗಳಲ್ಲಿ ಒಂದಾದ ಪಡಿಗಹಮುಚ್ಚಟ್ಠಾಣಂ ಎಂಬ 355ನೆಯ ಗಾಹೆಯನ್ನು ಕನ್ನಡ ವಡ್ಡಾರಾಧನೆಕಾರ ತನ್ನ ಮೊದಲನೆಯ ಕಥೆಯಾದ ಸುಕುಮಾರಸ್ವಾಮಿಯ ಕಥೆಯಲ್ಲಿಯೇ (ಪು. 7, ನೋಡಿ ಅಡಿಟಿಪ್ಪಣಿ) ಪ್ರಯೋಗಿಸಿದ್ದಾನೆ. ಇದರಿಂದಾಗಿ ವಡ್ಡಾರಾಧನೆಯ ಕಾಲ 933ರ ಅನಂತರ ಎಂಬುದು ನಿಶ್ಚಯ. 

# ಶೋಭನ ಗೀತ

—ಟಿ. ಕೇಶವ ಭಟ್ಟ

ಸಾಮಾಜಿಕ ಶುಭ ಸಮಾರಂಭಗಳಲ್ಲಿ ಹಾಡುವ ಸೊಗಸಾದ ಹಾಡುಗಳ ವರ್ಗವೆ 'ಶೋಭನಗೀತ'. ಈ ಹಾಡುಗಳನ್ನು ಆಯಾ ಸನ್ನಿವೇಶಕ್ಕೆ ತಕ್ಕಂತೆ ಮುತ್ತೈದೆಯರು ಹಾಗೂ ಕನ್ಯೆಯರು ಒಬ್ಬೊಬ್ಬರಾಗಿ ಅಥವಾ ಜೊತೆವಿಡಿದು ಹಾಡುವರು. ಉತ್ಸವ, ಪೂಜೆ, ವ್ರತಾದಿಗಳ ಆಚರಣೆಯಲ್ಲಿಯೂ ಇವನ್ನು ಹಾಡುವರು. ಈ ಹಾಡುಗಳಿಗೆ ಜಾನಪದ ವಿಶಿಷ್ಟ ಧಾಟಿಯಿರುತ್ತದೆ. ಶ್ರುತಿ ತಾಳ ವಾದನಗಳಿರುವುದಿಲ್ಲ. ಇವನ್ನು ರಚಿಸಿದವರು 'ಕುರಿತೋದದ' ಅಜ್ಞಾತ ಕವಿ, ಕವಯಿತ್ರಿಯರು. ಮುದ್ರಿತವಾಗದ ಇವುಗಳಲ್ಲಿ ಕಾಲಕಾಲಕ್ಕೆ ಅವೆಷ್ಟು ನಷ್ಟವಾದವೊ! ಪುನಃ ಸೃಷ್ಟಿಯಾದವೋ! ಹೇಳಲರಿದು. ಸ್ತ್ರೀಯರೆ ಹಾಡುವ ಗೀತಗಳಿವು. ಶೋಭನ, ಶೋಭಾನ, ಶೋಭಾನೆ, ಶೋಭಾನೆ ಹಾಡು ಎಂದೂ, ಜಾನಪದ ಭಾಷೆಯಲ್ಲಿ ಸೋಬಾನೆ, ಸೋಬಾನ, ಸೋಬಾನೆ ಹಾಡು ಅಥವಾ ಸೋಬಾನೆ ಪದ ಎಂದೂ ಈ ಹಾಡಿನ ಹೆಸರುಗಳು. ಕನ್ನಡದ ಕಾವ್ಯಗಳಲ್ಲಿ ಈ ಬಗೆಯ ಹಾಡನ್ನು ಮಂಗಲ ಗೀತ, ಶುಭಗೀತ, ಶೋಭನಗೀತ—ಎಂದು ಕರೆಯಲಾಗಿದೆ. ಧವಳಶೋಭನವೂ ಇವುಗಳಲ್ಲಿ ಒಂದು.

ಕನ್ನಡದಲ್ಲಿ ಮೂರು ಬಗೆಯ ಜನಪದ ಪದ್ಯಸಾಹಿತ್ಯ ಪ್ರಚುರವಾಗಿದೆ. ಮೊದಲನೆಯದು 'ಯಕ್ಷಗಾನ ಪದ'. ಈ ಪದಗಳು ಗಂಡುಸರ ಹಾಡುಗಳು. ಭಾಷೆ, ಛಂದೋಲಯಗಳಲ್ಲಿ ಸ್ವಲ್ಪ ಪ್ರಬುದ್ಧತೆ ತಾಳಿವೆ. ಇವು ಗಾನ, ವಾದನ, ನಾಟಕೀಯತೆಗಳಿಗೆ ಒಪ್ಪುತ್ತವೆ. ಈ ಪದಗಳಿಗೆ ಪ್ರಾಶಸ್ತ್ಯ ಹಿಂದೆಯೂ ಇತ್ತು, ಇಂದೂ ಕುಗ್ಗಿಲ್ಲ. ಎರಡನೆ ಬಗೆಯ ಪದ್ಯಸಾಹಿತ್ಯವೇ 'ಶೋಭನಗೀತ'. ಮೂರನೆಯದು ಜನಪದ ಗೀತ. ಹಳ್ಳಿ ಹಾಡು, ನಾಡ ಪದ—ಮುಂತಾಗಿಯೂ ಇದಕ್ಕೆ ಹೆಸರು. ಈ ಜನಪದ ಗೀತಗಳ ಸಂಗ್ರಹಣೆ, ಸಂಪಾದನೆ, ಸಮೀಕ್ಷೆ, ಪ್ರಕಟನೆಗಳು ಈಗ ಹೆಚ್ಚುಹೆಚ್ಚಾಗಿ ನಡೆಯುತ್ತಿವೆ. ಜನಪದ ಗೀತಗಳ ಅಂತರ್ಗತವಾಗಿ ಸೋಬಾನೆಗಳನ್ನು-ಅವುಗಳಲ್ಲಿಯೂ ಮದುವೆಗೆ, ದಾಂಪತ್ಯಕ್ಕೆ ಸೀಮಿತವಾದುವನ್ನು, ತ್ರಿಪದಿ ಹಾಗೂ ತ್ರಿಪದಿಯ ಛಾಯೆಯುಳ್ಳವನ್ನು ಮಾತ್ರ ಸ್ವಲ್ಪಮಟ್ಟಿಗೆ ಲಕ್ಷಿಸಿ ಸಂಗ್ರಹಣೆ ಪ್ರಕಟನೆಗಳು ನಡೆಯುತ್ತಿವೆ. ಸಂಸ್ಕೃತಿ ದೃಷ್ಟಿಯಿಂದ ಬೃಹತ್ತು ಮಹತ್ತು ಎರಡೂ ಉಳ್ಳ ಎಷ್ಟೋ ಸಾವಿರ ಸಂಖ್ಯೆಯ ಶೋಭನಗೀತಗಳು ಇದುವರೆಗಿನ ಸಂಗ್ರಹಕಾರರಿಂದ ಹೊರಗುಳಿದಿವೆ. ಅವುಗಳಲ್ಲಿರುವ ಅಧ್ಯಯನಾಂಗಗಳ ಕಡೆಗೆ ವಿದ್ವಾಂಸರ ಲಕ್ಷ್ಯ ಹರಿದಿಲ್ಲ. ಸೂಕ್ತವಾಗಿ ಸಂಗ್ರಹಣೆ ಪ್ರಕಟನೆಗಳಾಗಿಲ್ಲ.

ಈಚೆಗೆ 'ಹವ್ಯಕರ ಶೋಭಾನೆ'ಗಳನ್ನು ಸಾಧ್ಯತೆಗನುಗುಣವಾಗಿ ಸಂಗ್ರಹ ಮಾಡಲು ಹೊರಟ ಈ ಲೇಖಕನಿಗೆ ಎರಡು ಸಾವಿರದಷ್ಟು ಶೀರ್ಷಿಕೆಗಳ ಹಾಡುಗಳು ಉಪಲಬ್ಧವಾಗಿರುವುದು ಸಂತೋಷದ ಸಂಗತಿ. ಈ ಹಾಡುಗಳು ಗಾತ್ರದಲ್ಲಿ ಕಡಮೆಯೆಂದರೆ ಮೂರು ಸೊಲ್ಲುಗಳವು; ಹೆಚ್ಚೆಂದರೆ ನೂರು ಸೊಲ್ಲುಗಳಿಗೆ ಮೀರಿದುವು (ಸೊಲ್ಲು= ಹಾಡಿನ ಒಂದು ನುಡಿ; stanza). ಎಲ್ಲ ಕನ್ನಡಿಗ ಜನವರ್ಗದ ಶೋಭಾನೆಗಳನ್ನು ಸಂಗ್ರಹಿಸಿದರೆ ಇವು ಹತ್ತು ಸಾವಿರ ಶೀರ್ಷಿಕೆಗಳಷ್ಟಾಗ ಬಹುದು. ಹವ್ಯಕರ ಶೋಭಾನೆಗಳೇ ಇನ್ನೆರಡು ಸಾವಿರ ಸಿಗಬಹುದು. ಆದರೆ ವರ್ಷಗಳು ಕಳೆದಂತೆ ಈ ಹಾಡುಗಳು ಚಾಲನೆ (ಚಲಾವಣೆ) ಕಳೆದುಕೊಳ್ಳುತ್ತಿರು ವುದರಿಂದ ನಷ್ಟವಾಗುವವೆಂಬುದೂ ಅಷ್ಟೇ ಸ್ಪಷ್ಟ. ಇವುಗಳಲ್ಲಿ ಕೆಲವು, ಕಿರುಹೊತ್ತಿಗೆ ಗಳಲ್ಲಿ ಅಚ್ಚಾಗಿದ್ದರೂ ಕ್ರಮಬದ್ಧವಾಗಿ ಸಂಪಾದಿತವಾಗಿಲ್ಲ; ಛಂದೋರೂಪವುಳಿಸಿ ಅಚ್ಚಾಗಿಲ್ಲ. ಮೂಲದಲ್ಲಿದ್ದ ತಪ್ಪುಗಳಿಗೆ ಸಂಗ್ರಾಹಕರ ಮತ್ತು ಮುದ್ರಕರ ತಪ್ಪು ಗಳು ಸೇರಿರುವ ಪ್ರತಿಗಳೇ ಎಲ್ಲೆಲ್ಲೂ! ಕೆಲವರು ಸಂಗ್ರಾಹಕರು ತಾವೇ ಲೇಖಕ ರೆಂದು ಹೇಳಿಕೊಂಡುದೂ ಉಂಟು; ತಮ್ಮ ಒಂದೆರಡು ಹಾಡುಗಳನ್ನು ಪ್ರಕಟನೆಯಲ್ಲಿ ಸೇರಿಸಿಕೊಂಡುದೂ ಉಂಟು.

'ಶೋಭನ' ಎಂಬ ಸಂಸ್ಕೃತ ಶಬ್ದ ಹಲವು ಅರ್ಥಗಳುಳ್ಳುದು. ಮಂಗಲಕರ, ಸುಂದರ, ಕಾಂತಿಯುತ, ಪುಣ್ಯಕರ, ನೀತಿಯುಕ್ತ ಎಂಬ ಅರ್ಥಗಳನ್ನಲ್ಲದೆ 'ಶಿವ' ಎಂಬ ಅರ್ಥವನ್ನು ಅದು ಕೊಡುತ್ತದೆ. ಶುಭ ಸಮಾರಂಭಗಳಲ್ಲಿ ಪ್ರಯುಕ್ತವಾಗು ವುದರಿಂದ 'ಮಂಗಲಕರ' ಎಂಬುದಿಲ್ಲಿ ಪ್ರಸ್ತುತ. 'ಸೋಬಾನೆ' ಎಂಬುದನ್ನು ಜಾನಪದ ಹಾಡುಗಳಲ್ಲಿ ಪಲ್ಲವಿಯಾಗಿ 'ಸೋ' ಎಂದು 'ಸುವ್ವಿ' ಎಂದು ಮಾಡುವ ಉಚ್ಚಾರಣೆ 'ಶಿವ' ಎಂಬರ್ಥವನ್ನೆ ಕೊಡುತ್ತದೆ. ವಧು-ವರರಿಗೆ ಆರತಿ ಬೆಳಗುವ ಸಂದರ್ಭದಲ್ಲಿ ಹಾಡುವ ಧವಳಾರಗಳಲ್ಲಿ ಕೊನೆಗೆ ಪಲ್ಲವಿಯಂತೆ 'ಶೋಭಾನೆ' ಎನ್ನು ವುದುಂಟು. ಇದು ಮಂಗಲಕರ (ಶಿವ) ಎಂಬ ಅರ್ಥವನ್ನು ಕೊಡುವುದಲ್ಲದೆ 'ಶೋಭಾನೆ ಹಾಡು' ಎಂಬ ಸೂಚಕವೂ ಆಗುತ್ತದೆ. 'ಗೀತ' ಎಂದರೆ ಹಾಡು. ಕೆಲವರು ಇದನ್ನು 'ಗೀತೆ' ಎಂದು ಪ್ರಯೋಗಿಸುವುದರಿಂದ ಶಬ್ದವಿವೇಚನೆ ಅವಶ್ಯ.

## ಗೀತ-ಗೀತೆ, ಪದ-ಹಾಡು

ಸಂಸ್ಕೃತದಲ್ಲಿ 'ಗೀತಂ' ಎಂಬ ನಪುಂಸಕಲಿಂಗ ಶಬ್ದವಿದೆ. 'ಗೀಯತೇ' 'ಹಾಡುವಂತಹದು' ಎಂದು ಇದರ ವ್ಯುತ್ಪತ್ತಿ. ಇದರ ಲಕ್ಷಣವನ್ನು ಹೀಗೆ ಹೇಳ ಲಾಗಿದೆ—

ಧಾತು ಮಾತು ಸಮಾಯುಕ್ತಂ ಗೀತಮಿತ್ಯುಚ್ಯತೇ ಬುಧೈಃ
ತತ್ರ ನಾದಾತ್ಮತೋ ಧಾತುರ್ಮಾತುರಕ್ಷರಸಂಜ್ಞಕಃ[1]

---

1 ರಾಧಾಕಾಂತ-ಶಬ್ದಕಲ್ಪದ್ರುಮ.

ಇದರ ಪ್ರಕಾರ, ನಾದಾತ್ಮಕವಾಗಿಯೂ ಅಕ್ಷರಾತ್ಮಕವಾಗಿಯೂ ಇರುವಂತಹದು, ಅಂದರೆ ಹಾಡಲು ಅಳವಡುವ ಪದ್ಯವೇ ಗೀತ–ಎಂದ ಹಾಗಾಯಿತು. ಇದಲ್ಲದೆ ‘ಗೀತಮೆನೆ ಗಾನಮೆನೆ ಪಾಡೆನಿಸಿಕ್ಕುಂ’[2] ಎಂಬ ನಿಘಂಟಿನ ಮಾತೂ ಇದೆ. ಸಂಸ್ಕೃತದಲ್ಲಿ ‘ಗೀತಾ’ ಎಂಬ ಆಕಾರಾಂತ ಸ್ತ್ರೀಲಿಂಗ ಶಬ್ದವಿದೆ. ಇದು ಕನ್ನಡದಲ್ಲಿ ‘ಉದಾತಃ ಸ್ತ್ರೀಯಾಂ’ ಎಂಬ ಶಬ್ದಾನುಶಾಸನದ ಸೂತ್ರದಂತೆ ‘ಗೀತೆ’ ಎಂದಾಗುತ್ತದೆ. ಇದರ ವ್ಯುತ್ಪತ್ತಿ ಕೂಡ ‘ಗೀಯತೇ’ ಎಂಬುದಾಗಿದ್ದರೂ ಇದು ‘ಗೀತ’ಕ್ಕೆ ಭಿನ್ನವಾದುದು. ಶಬ್ದಕಲ್ಪದ್ರುಮ, ವಾಚಸ್ಪತ್ಯ ನಿಘಂಟುಗಳ ಪ್ರಕಾರ, ಗುರುಶಿಷ್ಯಕಲ್ಪನೆಯಿಂದ ಆತ್ಮವಿದ್ಯೋಪದೇಶಕವೂ ಬ್ರಹ್ಮತತ್ತ್ವೋಪದೇಶಮಯವೂ ಆದುದು ‘ಗೀತೆ’. ‘ಭಗವದ್ಗೀತೆ’ ಇದಕ್ಕೆ ಮುಖ್ಯ ಉದಾಹರಣೆ. ಶಿವಗೀತೆ, ಗಣೇಶಗೀತೆ, ರಾಮಗೀತೆ–ಮುಂತಾದುವೆಲ್ಲ ಗೀತೆಗಳು. ಈ ಕಾರಣದಿಂದ ಜನಪದಗೀತೆ, ಶೋಭನಗೀತೆ, ಹಾಸ್ಯಗೀತೆ, ಭಾವಗೀತೆ, ಗೃಹಿಣೀಗೀತೆ—ಎಂಬುದು ತಪ್ಪಾಗುತ್ತದೆ. ‘ಗೀತ’ ಎಂಬುದೇ ಸರಿ. ಲಲಿತಕಲೆಗಳಲ್ಲಿ ಶ್ರೇಷ್ಠವಾದ ‘ಸಂಗೀತ’ ಎಂಬಲ್ಲಿ ‘ಗೀತ’ ಎಂಬುದಿದೆಯಲ್ಲದೆ ‘ಗೀತೆ’ ಇಲ್ಲ. ಜಯದೇವ ಕವಿಯ ‘ಗೀತಗೋವಿಂದ’, ಕವಿ ಬೇಂದ್ರೆಯವರ ‘ಸಖೀಗೀತ’, ಡಾ|| ಗದ್ದಗಿಮಠರ ಮಹಾಪ್ರಬಂಧವಾಗಿರುವ ‘ಕನ್ನಡ ಜನಪದ ಗೀತಗಳು’ ಎಂಬಲ್ಲೆಲ್ಲ ‘ಗೀತ’ ಎಂಬ ಅಕಾರಾಂತ ಪದವನ್ನೆ ಬಳಸಿರುವುದು ಲಕ್ಷ್ಯಾರ್ಹ.

‘ಹಾಡು’ ಎಂಬರ್ಥದಲ್ಲಿರುವ ಇನ್ನೊಂದು ಶಬ್ದ ‘ಪದ’. ದಾಸರ ಪದ, ಯಕ್ಷಗಾನ ಪದ, ತುಂಡು ಪದ, ಡೊಳ್ಳಿನ ಪದ, ಮಕ್ಕಳ ಪದ, ಹಳ್ಳಿಯ ಪದ, ನಾಡಪದ ಎಂಬಲ್ಲೆಲ್ಲ ‘ಹಾಡು’ ಎಂಬರ್ಥದಲ್ಲಿ ‘ಪದ’ ಬಳಕೆಯಾಗಿದೆ. ಸಂಸ್ಕೃತದ ಶಬ್ದಕೋಶಗಳಲ್ಲಿ ‘ಹಾಡು’ ಎಂಬ ಅರ್ಥದಲ್ಲಿ ಇದು ಕಂಡುಬರುವುದಿಲ್ಲವಾದರೂ ನಾಟ್ಯಶಾಸ್ತ್ರದಲ್ಲಿ ಗಾನಕ್ಕೆ ಪ್ರಶಸ್ತವಾದ ಛಂದೋರಚನೆಯನ್ನು ಪಾರಿಭಾಷಿಕವಾಗಿ ಪದ, ಜಾತಿ, ಅಕ್ಷರ ಎಂದಿರುವುದಾಗಿ ತಿಳಿದುಬರುತ್ತದೆ.[3] ‘ಜಾತಿ’ ಎಂಬುದು ಮಾತ್ರಾಗಣಬದ್ಧವಾದ ಹಾಡು (ಜಾತಿರ್ಮಾತ್ರಾಕೃತಾ ಭವೇತ್). ಅಕ್ಷರ (ಅಕ್ಕರ) ಎಂಬುದನ್ನು ಹಾಡೆಂಬ ಅರ್ಥದಲ್ಲಿ ಸರ್ವಜ್ಞನು ಬಳಸಿದ್ದಾನೆ.[4] ಕನ್ನಡದಲ್ಲಿ ಪ್ರಾಕ್ಕಾಲದಿಂದ ಇಂದಿನವರೆಗೂ ಹಾಡುವುದಕ್ಕೊಪ್ಪುವ ರಚನೆ, ಅದು ಕೂಡ ಹೆಚ್ಚಾಗಿ ಪಲ್ಲವಿಯಿಂದ ಕೂಡಿದುದು–ಎಂದು ‘ಪದ’ವನ್ನು ತಿಳಿಯಲಾಗಿದೆ:—

---

2 ಮಂಗರಸ—ಅಭಿನವಾಭಿಧಾನಂ, ಪುಟ 23, ಪದ್ಯ 3.

3 ಕುಕ್ಕಿಲ ಕೃಷ್ಣಭಟ್ಟ—‘ಬೆದಂಡೆ-ಚತ್ತಾಣ’, ಕಮ್ಮಟದ ಕಿಡಿಗಳು, ಪ್ರಬುದ್ಧ ಕರ್ಣಾಟಕ 53-3 (1971) ಪುಟ 138-145.

4 ಪ್ರಾಸಿಲ್ಲದಕ್ಕರವ ತಾಸು ಹಾಡಿದರೇನು
ಸಾಸಿವೆ ಸುಣ್ಣ ಹದಮಾಡಿ–ಕಣ್ಣಿಂಗೆ
ಪೂಸಿಕೊಂಡಂತೆ–ಸರ್ವಜ್ಞ

ನಲ್ಲಳೆ ಪದವಿಡುವೆಡೆಯೊಳ್
ಪಲ್ಲವದೊಳ್ ಪದದೊಳುಭಯ ಗಣ ಸಮನಾಗಲ್
ಸಲ್ಲಲಿತ ಕೀರ್ತಿಯಾದಪು
ದಲ್ಲದೊಡಾ ಕೃತಿಗೆ ಹಾನಿ ತಪ್ಪದೆ ಬರ್ಕುಂ[5]

ಪಲ್ಲವಿಯಲ್ಲಿಯೂ ಪದದಲ್ಲಿಯೂ ಗಣಗಳು ಒಂದೇ ರೀತಿಯವಾಗಿರಬೇಕೆಂದು ಇಲ್ಲಿ ಸೂಚಿಸಲಾಗಿದೆ. ಪಲ್ಲವಿಯು ಪದದ ಗರ್ಭ (ಪದಗರ್ಭಂ ತು ಪಲ್ಲವೀ). ಆದುದರಿಂದ ಪಲ್ಲವಿಯಲ್ಲಿ ಹೇಳಲಾದ ಸಂಗತಿಯನ್ನು ಪದದಲ್ಲಿ ವಿಸ್ತರಿಸಬೇಕೆಂದು ಕವಿಜಿಹ್ವಾಬಂಧನದಲ್ಲಿ ಸೂಚಿಸಲಾಗಿದೆ. ಪದದೊಂದಿಗೆ ಪ್ರಯೋಗಗೊಂಡಿರುವ ಇನ್ನೊಂದು ಶಬ್ದ ಪದ್ಯ. 'ಪದ ಪದ್ಯಂಗಳ್' ಎಂಬ ಪ್ರಯೋಗ ಕವಿಜಿಹ್ವಾಬಂಧನ ದಲ್ಲಿ ಹಲವು ಕಡೆ ಬಂದಿದೆ. ವೃತ್ತಾದಿ ಪ್ರೌಢ ರಚನೆ ಪದ್ಯವೆಂದೂ ಪಲ್ಲವಿಯಿಂದ ಕೂಡಿ, ಹಾಡುವುದಕ್ಕಾಗಿ ರಚಿತವಾದುದು 'ಪದ'ವೆಂದೂ ತಿಳಿದುಕೊಳ್ಳಬಹುದು.

ಪದ, ಹಾಡು ಎಂಬಿವು ಸಮಾನಾರ್ಥಕಗಳೇ ಆದರೂ ಇವೆರಡರೊಳಗೂ ಲಕ್ಷಣ ಭೇದ ಗುರುತಿಸುವಂತಿದೆ. ಪುರುಷರು ಹಾಡುವುದನ್ನು 'ಪದ ಹೇಳುವುದು' ಎಂತಲೂ ಸ್ತ್ರೀಯರು ಹಾಡುವುದನ್ನು 'ಹಾಡು ಹೇಳುವುದು' ಎಂತಲೂ ನಿರ್ಧಾರಮಾಡುವಷ್ಟು ರೂಢಿ ಈಗ ಬಲಗೊಂಡಿದೆ. ಹೆಂಗುಸರು ಮಾತ್ರವೆ ಹಾಡುವ ಶೋಭಾನೆಗಳು 'ಶೋಭಾನೆ ಹಾಡುಗಳು'. ವಿರಳವಾಗಿ ಕೆಲವು ಕಡೆ ಇವನ್ನು 'ಸೋಬಾನೆ ಪದಗಳು' ಎನ್ನುವುದುಂಟು. ಆದರೆ 'ಸೋಬಾನೆ ಹಾಡುಗಳು' ಎನ್ನುವುದು ಹೆಚ್ಚು ಸಮಂಜಸ. ಶೋಭನ ಗೀತಗಳು ಹೆಚ್ಚು ಪ್ರಚುರವಾಗಿರುವ ಹವ್ಯಕರಲ್ಲಿ 'ಸೋಬಾನೆ ಪದ' ಎಂಬುದು ಬಳಕೆಯಲ್ಲಿಲ್ಲ. 'ಸೋಬಾನೆ ಹಾಡು' ಎಂದೇ ಬಳಕೆ. ಗಂಡುಸರು ಹಾಡುವ ಯಕ್ಷಗಾನದ ಪದ್ಯಗಳಿಗೆಲ್ಲ 'ಪದ' ಎಂದೇ ಸಂಜ್ಞೆ. ಈ ಪದಗಳ ಒಂದೊಂದು ನುಡಿಗೂ 'ಪದ' ಎಂತಲೇ ಹೆಸರು. ಉದಾ: ಯಕ್ಷಗಾನದಲ್ಲಿ 'ಕೇತಾರ ಗೌಳ ಅಷ್ಟತಾಳ' ಎಂಬ ಸೂಚನೆಯಿರುವ ಶೀರ್ಷಿಕೆಯಲ್ಲಿ ನಾಲ್ಕೈದು ನುಡಿ (Stanza) ಗಳಿರುತ್ತವೆ. ಈ ಪ್ರತಿಯೊಂದನ್ನೂ ಒಂದು 'ಪದ' ಎನ್ನಲಾಗುತ್ತದೆ. ಆದರೆ ಶೋಭಾನೆ ಹಾಡುಗಳ ಒಂದೊಂದು ನುಡಿಗೆ 'ಸೊಲ್ಲು' ಎಂದು ಹೆಸರು. 'ದಾಸರ ಪದಗಳು' ಭಕ್ತಿನೀತ ಗೀತಗಳಾಗಿ ಉಭಯತರ ಹಾಡುಗಳಾಗಿವೆ.

## ಶೋಭನಗೀತಗಳ ಪ್ರಾಚೀನತೆ

ಕ್ರಿ. ಶ. ಸುಮಾರು 850ರಲ್ಲಿ ರಚಿತವಾದ ಕನ್ನಡದ ಲಕ್ಷಣಗ್ರಂಥಗಳಲ್ಲಿ ಮೊದಲನೆಯದಾದ ಕವಿರಾಜಮಾರ್ಗದಲ್ಲಿ ಆ ಕಾಲಕ್ಕೆ ಹಿಂದೆಯೇ ರೂಢಿಪಡೆದಿದ್ದ 'ಬೆದಂಡೆ ಚತ್ತಾಣ' ಎಂಬ ದೇಸಿಗಬ್ಬಗಳನ್ನು ಪ್ರಸ್ತಾವಿಸಲಾಗಿದೆ. ಕಂದ ವೃತ್ತಗಳು ಒಂದೊಂದೆಡೆ ಒಂದೊಂದು ಇರಬೇಕು. ಜಾತಿ (ಅಂದರೆ ಮಾತ್ರಾಗಣ ಘಟಿತವಾದ

5. ನಾಗವರ್ಮ—ಛಂದೋಂಬುಧಿ.

ಪದ ; ಹಾಡು) ಜಾಣ್ಮೆಯಿರಬೇಕು. ಇಂತಹ ರಚನೆಯನ್ನು 'ಬೆದಂಡೆ' ಎನ್ನಲಾಗಿದೆ.[6] ಈ ಲಕ್ಷಣಕ್ಕೆ ಇಂದು ಪ್ರಚಲಿತವಿರುವ ಪ್ರಕಾರಗಳಲ್ಲಿ ಲಕ್ಷ್ಯವನ್ನು ಹುಡುಕಿದರೆ, ಗಂಡಸರ ಹಾಡೆನಿಸುವ ಯಕ್ಷಗಾನ ಪ್ರಸಂಗ ಪದಗಳಲ್ಲಿ ಹೋಲುವೆ ಕಾಣುತ್ತದೆ. ಪ್ರಾಚೀನ ಕಾಲದ ಬೆದಂಡೆ ಪದಗಳು ಇಂದು ಉಪಲಬ್ಧವಿಲ್ಲ. ಕವಿರಾಜಮಾರ್ಗದಲ್ಲಿ ನಿರೂಪಿತವಾಗಿರುವಂತೆ 'ಚತ್ತಾಣ' ಎಂದರೆ 'ಹಲವು ಕಂದಗಳು, ಸುಂದರ ವೃತ್ತಗಳು, ಅಕ್ಕರ, ಚೌಪದಿ, ಗೀತಿಕೆ, ತ್ರಿಪದಿ—ಎಂಬೀ ಆರು ಬಗೆಯ ಛಂದೋರಚನೆ ಸ್ಥಾನ ಪಡೆದಿರುವ (ಆದುದರಿಂದ ಷಟ್‌ಸ್ಥಾನ- ಚತ್ತಾಣವೆನಿಸುವ) ಹಾಡುಗಳನ್ನುಳ್ಳುದೆಂದು ವಿವರಣೆ ಮಾಡಲಾಗಿದೆ.[7] ಈ ಚತ್ತಾಣವು ಆ ಕಾಲದ ಶೋಭನ ಗೀತಗಳ ಸೂಚಕವೆಂದು ಭಾವಿಸಬಹುದಾಗಿದೆ. ಕಂದ-ವೃತ್ತಗಳನ್ನೂ ಹಿಂದೆ ಶೋಭನಗೀತಗಳಲ್ಲಿ ಬಳಸುತ್ತಿದ್ದಿರಬಹುದು. 'ವೃತ್ತ' ಎಂಬುದು ಜಾತಿವೃತ್ತವಾಗಿ ಇದ್ದಿರಲೂ ಸಾಧ್ಯ. ಇನ್ನುಳಿದ ಛಂದೋಬಂಧಗಳು ಯಥಾರೀತಿಯೂ ಕೆಲವು ಮಾರ್ಪಾಡಿನೊಂದಿಗೂ ಇಂದಿನ ಸೋಭಾನೆಗಳಲ್ಲಿ ಕಾಣಸುತ್ತವೆ. ಸೋಭಾನೆಗಳ ಪ್ರಭೇದಗಳಾಗಿರುವ ಸರಳಾರ, ಧವಳಾರಗಳು ಅಂಶಗಣ ಮಾತ್ರಾಗಣಗಳ ಒಡಂಬಡಿಕೆಯಿಂದ ದ್ರುತ–ಮಧ್ಯಮ–ವಿಳಂಬ ಗತಿಗಳ ವಿನ್ಯಾಸದಿಂದ ಗೇಯತೆವಡೆದು ಚಿತ್ತಾಯನ(ಚಿತ್ತಕ್ಕೆ ಶುಭ) ಕರವಾಗಿದೆ.

ದೇಸಿಗಬ್ಬಗಳಾಗಿರುವ ಜನಪದ ಗೀತಗಳು ವಿದ್ವತ್ಕವಿಗಳಿಂದ ಪೂರ್ಣವಾಗಿ ಅಲಕ್ಷಿತವಾದುವೆಂಬ ಹೇಳಿಕೆಯುಂಟು. ಜಾನಪದ ಕವಿಗಳನ್ನು ಕುಕವಿಗಳೆಂದು ಖಂಡಿಸಿರುವುದಾಗಿ ಭಾವಿಸಿರುವುದುಂಟು. ಮಧುರಕವಿಯ ಪದ್ಯವೊಂದನ್ನು ಜಾನಪದ ವಿದ್ವಾಂಸರು ಇಂದಿನವರು ಆಗಾಗ ಉದಾಹರಿಸುತ್ತಾರೆ.[8] ಇದು ಜಾನಪದ ಕವಿಗಳ ಬಗೆಗೆ ತಾತ್ಸಾರದ ಮಾತಲ್ಲ ಎನ್ನಬೇಕಾಗುತ್ತದೆ. ಪಂಡಿತ ಕವಿಗಳಿಂದ ಕುಕವಿಗಳೆಂದು ನಿಂದಿತರಾದವರು ಜನಪದ ಕವಿಗಳಲ್ಲ. ವಿದ್ವತ್ಕವಿಗಳು ಜನಪದ ಸಾಹಿತ್ಯವನ್ನು ಅದರದೇ ಆದ ಸೊಗಸಿಗಾಗಿ ಮೆಚ್ಚಿದ್ದಕ್ಕೆ ಉದಾಹರಣೆಗಳು ತುಂಬಾ ಇವೆ. ಕವಿರಾಜಮಾರ್ಗದಲ್ಲಿ ಚತ್ತಾಣ ಬೆದಂಡೆ ಪಗರಣಗಳ ನಿಂದೆಯಿಲ್ಲ ; ಸ್ವರೂಪ ನಿರೂಪಣವಿದೆ. ಕುಕವಿನಿಂದಕರಲ್ಲಿ ಅತಿಸಮರ್ಥನಾದ ನೇಮಿಚಂದ್ರನು (1170) ಒನಕೆವಾಡನ್ನು ಪ್ರಸ್ತಾವಿಸಿ, ಅದನ್ನು ಹಾಡುವ ಹೆಂಡಿರ ವಿನೋದಕ್ಕೆ ಮೆಚ್ಚಿ ರಾಜನು ನಕ್ಕುದಾಗಿ ತಿಳಿಸಿದ್ದಾನೆ.[9] ಶಿವಮಾರ ಸೈಗೊಟ್ಟನು (ಕ್ರಿ. ಶ. 800) ಬರೆದ ಗಜಾಷ್ಟಕದ ಪ್ರಚುರತೆಯನ್ನು ಒಂದು ಶಾಸನದ ವಿದ್ವತ್ಕವಿಯು ಓವನಿಗೆ

---

6. ಕವಿರಾಜಮಾರ್ಗ–I–34.

7. ಕವಿರಾಜಮಾರ್ಗ–I–35 ಮತ್ತು ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ–ಸಂಪುಟ I, ಪುಟ 58–61.

8. ಡಾ॥ ಗದ್ದಗಿಮಠ-ಕನ್ನಡ ಜಾನಪದ ಗೀತಗಳು (1963). ಪ್ರಸ್ತಾವನೆ.

9. ನೇಮಿಚಂದ್ರ–ಲೀಲಾವತೀ ಪ್ರಬಂಧಂ ಆ. 2. ಪದ್ಯ 35 ಮುಂದಣ ಗದ್ಯ.

ಒನಕೆವಾಡುಗಳಿಗೆ ಹೋಲಿಸಿದ್ದಾನೆ.[10] ಈ ಹೋಲಿಕೆಯ ಮೂಲಕ ಅವನು ಜನಪದ ಗೀತಗಳನ್ನು ಮೆಚ್ಚಿದ್ದಾನೆನ್ನಬಹುದು. ಆಧುನಿಕ ವಿದ್ವಾಂಸರಲ್ಲಿ ಬಿ. ಎಂ. ಶ್ರೀ. ಯವರು ಮತ್ತು ಅವರಿಂದೀಚೆಯವರೆಲ್ಲ ಜನಪದ ಸಾಹಿತ್ಯಕ್ಕೆ ಅತ್ಯಂತ ಗೌರವವನ್ನು ಸಲ್ಲಿಸಿದ್ದಾರೆ; ನಿಂದೆ ಮಾಡಿಲ್ಲ. ಹೀಗಿರುವಾಗ ಜನಪದ ಸಾಹಿತ್ಯದ ಹಿರಿಮೆಯನ್ನು ಸಾರುವ ನೆಪದಲ್ಲಿ ವಿದ್ವತ್ಕಾವ್ಯಗಳನ್ನೂ ವಿದ್ವತ್ಕವಿಗಳನ್ನೂ ಅವಹೇಳನ ಮಾಡುವುದು ಇಂದಿನ ಜಾನಪದ ವಿದ್ವಾಂಸರಿಗೆ ಸರ್ವಥಾ ಯುಕ್ತವಲ್ಲ.

## ಕಾವ್ಯಗಳಲ್ಲಿ ಶೋಭನ ಗೀತಗಳ ಉಲ್ಲೇಖ

ಕನ್ನಡದ ಕಾವ್ಯಗಳಲ್ಲಿ ಶೋಭನಗೀತವನ್ನು ಮಂಗಲಗೀತ, ಶುಭಗೀತ, ಶೋಭನ, ಧವಳ ಶೋಭನ—ಎಂದು ಉಲ್ಲೇಖಿಸಿದ ಉದಾಹರಣೆಗಳಿವೆ. ಆದಿಕವಿ ಪಂಪನು (941) ಜಿನಶಿಶುವಿನ ಜನ್ಮಾಭಿಷೇಕೋತ್ಸವದಲ್ಲಿ ದೇವಾಂಗನೆಯರಿಂದ ಮಂಗಲಗೀತ ನಿನದವುಂಟಾಯಿತೆಂದು ಹೇಳಿದ್ದಾನೆ.[11] ರನ್ನನ ಗದಾಯುದ್ಧ (990) ದಲ್ಲಿ (ಆ 5, ಪದ್ಯ 41) ಧವಳ ಮಂಗಳಗೇಯದ ಉಲ್ಲೇಖವಿದೆ. ಚೌಂಡರಾಜನ (1200) ನಳಚಂಪು ನಳದಮಯಂತಿಯರ ಮದುವೆಯಲ್ಲಿ ಸುವಾಸಿನಿಯರು 'ಧವಳಾಖ್ಯ'ವನ್ನು ಹಾಡಿದರೆಂದು (ಪದ್ಯ 425) ತಿಳಿಸುತ್ತದೆ. ರಾಘವಾಂಕನ (1235) ಸಿದ್ಧರಾಮಚಾರಿತ್ರದಲ್ಲಿ (ಆ 8, ಪದ್ಯ 89) 'ಮಂಗಳಾರತಿವಿಡಿದು ಧವಳವಂ ಹಾಡುತಿರಲು'-ಎಂಬ ವಾಕ್ಯವಿದೆ. ಬೊಮ್ಮರಸನ (1485) ಸನತ್ಕುಮಾರ ಚರಿತ್ರೆಯಲ್ಲಿ (ಸಂಧಿ 7, ಪದ್ಯ 48; ಸಂಧಿ 9, ಪದ್ಯ 41) 'ಶೋಭನ ಗೀತ'ದ ಪ್ರಸ್ತಾವವಿದೆ. ನರಹರಿಯ (1500) ತೊರವೆ ರಾಮಾಯಣದಲ್ಲಿ 'ತರುಣಿಯರ ಶುಭಗೀತ'ದ ಉಲ್ಲೇಖವಿದೆ (ಬಾಲಕಾಂಡ, ಸಂಧಿ 16, ಪದ್ಯ 40). ವೀರಭದ್ರ ನೃಪಾಲನ (1530) ವೀರಭದ್ರ ವಿಜಯ (ಆ. 9, ಪದ್ಯ 75) 'ಶೋಭನಂಗಳಂ ಪಾಡುತ್ತುಂ' ಎಂದು ತಿಳಿಸುತ್ತದೆ. ಕನಕದಾಸನ (1550) ಮೋಹನ ತರಂಗಿಣಿಯಲ್ಲಿ (ಸಂಧಿ 15, ಪದ್ಯ 27 ಮತ್ತು 35; ಸಂಧಿ 17, ಪದ್ಯ 40; ಸಂಧಿ 40, ಪದ್ಯ 23) 'ಧವಳ ಶೋಭಾನ' ಹಾಡಿದುದನ್ನು ಹೇಳಲಾಗಿದೆ. ಇದೇ ಕವಿಯ ನಳಚರಿತ್ರೆ (ಸಂಧಿ 3, ಪದ್ಯ 68) 'ಪಾಡಿದರು ಮುತ್ತೈದೆಯರು ಶೋಭನವ' ಎಂದಿದೆ. ಸಿದ್ಧನಂಜೇಶನ (1550) ರಾಘವಾಂಕ ಚಾರಿತ್ರದಲ್ಲಿ (ಸಂಧಿ 7, ಪದ್ಯ 74 ಮತ್ತು 77) ನಾರದನು ಶಿವನ ಮನವನ್ನು ಧವಳಾರದ ಕಡೆಗೆ ಸೆಳೆದುದಾಗಿ ಹೇಳಿದೆ. ರತ್ನಾಕರವರ್ಣಿಯ (1550) ಭರತೇಶ ವೈಭವ (ಭೋಗವಿಜಯ, ಉಪ್ಪರಿಗೆ ಸಂಧಿ, ಪದ್ಯ 64) ಶೋಭನ ಹಾಡುವುದನ್ನು ತಿಳಿಸುತ್ತದೆ. ಹೆಳವನಕಟ್ಟೆ ಗಿರಿಯಮ್ಮನ (1750) ಚಂದ್ರಹಾಸನ ಕಥೆಯಲ್ಲಿ (ಸಂಧಿ 4, ಪದ್ಯ 37) 'ಮಂಗಳ ಧವಳ' ಹಾಡಿದುದನ್ನು ಪ್ರಸ್ತಾವಿಸಿದೆ.

---

10. ಇ. ಪಿ. ಸಂಪುಟ VIII-ಶಿವಮೊಗ್ಗ, ಭಾಗ II, ನಗರ ತಾಲ್ಲೂಕು 35.
11. ಪಂಪ-ಆದಿಪುರಾಣ-ಆ 7, ಪದ್ಯ 79.

ಶೋಭನಗೀತಗಳ ಪ್ರಭೇದಗಳಲ್ಲಿ ಒಂದಾಗಿರುವ ಧವಳ ಅಥವಾ ಧವಳಾರ (ಡವಳಾರ) ಎಂಬ ಹಾಡಿನ ಬಗ್ಗೆ ವಿದ್ವಾಂಸರಿಂದ ಸಂಶೋಧನೆಗಳು ನಡೆದಿವೆ. ಡಾ|| ಡಿ. ಎಲ್. ನರಸಿಂಹಾಚಾರ್ಯರು 'ಧವಳ'ವೆಂಬ ಹಾಡಿನ ಸ್ವರೂಪ[12] ಎಂಬ ಲೇಖನದಲ್ಲಿ ಹೀಗೆಂದಿದ್ದಾರೆ:—"ಅದು (ಧವಳ ಎಂಬುದು) ಮಂಗಳದ ಸಮಯದಲ್ಲಿ ಆರತಿ ಎತ್ತುವಾಗ ಹೆಣ್ಣುಮಕ್ಕಳು ಹೇಳುವ ಹಾಡೆಂಬುದರಲ್ಲಿ ಸಂದೇಹವಿಲ್ಲ. ಈಗಲೂ ಹೆಣ್ಣುಮಕ್ಕಳು ಹೇಳುವ ಹಾಡುಗಳಲ್ಲಿ ಧವಳಗಳು ಅಲ್ಲಲ್ಲಿ ಹುದುಗಿರ ಬಹುದು .... ಕನ್ನಡದ ಯಕ್ಷಗಾನಗಳನ್ನೂ ಹೆಣ್ಣುಮಕ್ಕಳ ಹಾಡುಗಳನ್ನೂ ಬೆದಕಿ ನೋಡಿದರೆ, ಧವಳದ ಹಾಡುಗಳು ಇನ್ನೂ ಹೇರಳವಾಗಿ ಸಿಕ್ಕಬಹುದು" (ಪುಟ 684). ಹೀಗೆ ಹೇಳಿರುವ ಲೇಖಕರು ಉದಾಹರಿಸಿರುವ ಕನ್ನಡದ ಹಾಡೊಂದೂ ಆರತಿ ಹಾಡಲ್ಲ. ಆದರೆ, ಧವಳದ ಸ್ವರೂಪವನ್ನು ಅನ್ವೇಷಣೆ ಮಾಡು ವವರಿಗೆ ಸೂಕ್ತ ಮಾರ್ಗದರ್ಶನ ಅವರ ಮಾತುಗಳಲ್ಲಿದೆಯೆಂಬುದರಲ್ಲಿ ಸಂಶಯವಿಲ್ಲ.

ಚಾಲುಕ್ಯ ಸೋಮೇಶ್ವರನ (1130) 'ಅಭಿಲಷಿತಾರ್ಥ ಚಿಂತಾಮಣಿ', ಶಾರ್ಙ್ಗ ದೇವನ (1240) 'ಸಂಗೀತ ರತ್ನಾಕರ,' ಪಾರ್ಶ್ವದೇವನ (13ನೆಯ ಶತಮಾನ) 'ಸಂಗೀತ ಸಮಯಸಾರ', ಹರಿಪಾಲದೇವನ (13ನೆಯ ಶತಮಾನ) 'ಸಂಗೀತ ಸುಧಾಕರ'—ಎಂಬ ಗ್ರಂಥಗಳಲ್ಲಿ ಉಕ್ತವಾಗಿರುವಂತೆ 'ಧವಲ' ಎಂಬ ಹಾಡಿನ ಪ್ರಭೇದವನ್ನು ವಿವರಿಸುವ ಒಂದು ಲೇಖನವನ್ನು ಸಂಗೀತ ವಿದ್ವಾಂಸರೂ ಸಂಶೋಧಕರೂ ಆದವರೊಬ್ಬರು ಬರೆದು ಪ್ರಕಟಿಸಿದ್ದಾರೆ.[13] ಈ ಲೇಖನದಲ್ಲಿ ಧವಳದ ಪ್ರಭೇದವನ್ನೆಲ್ಲ ವಿವರಿಸಲಾಗಿದೆ. 'ನಾಗಕುಮಾರನ ಶೋಭಾನೆ' ಎಂಬ ತಾಳೆಗರಿ ಗ್ರಂಥದಿಂದ 'ಭರತೇಶ್ವರನ ಹಸೆಗೆ ಕರೆದದ್ದು' ಎಂಬ ಧವಳ ಶೋಭಾನ ವನ್ನು ಉದಾಹರಿಸಲಾಗಿದೆ. ಈ ಉದಾಹರಣೆಯಲ್ಲಿ ಧವಳದ ಪಾದ, ವರಣ, ವಿಭಜನೆ ಸರಿಯಾಗಿಲ್ಲದುದರಿಂದ ಲಕ್ಷಣಾನ್ವಯವಾಗಿಲ್ಲ. ಉದಾಹರಿಸಿದ ಸೊಲ್ಲು ಧವಳಾರಕ್ಕೆ ಉದಾಹರಣೆ ಹೌದು.

ಮುಖ್ಯವಾಗಿ ಮದುವೆಯ ಹಾಡುಗಳೆನಿಸಿರುವ ಸೋಬಾನೆಗಳು ಕರ್ನಾಟಕದ ಎಲ್ಲ ಜನವರ್ಗದಲ್ಲಿಯೂ ಪ್ರಚಲಿತವಿವೆ. ಕೆಲವು ಹಬ್ಬನೋಂಪಿಗಳ ಸೋಬಾನೆಗಳೂ ಇವೆ. ಇವೆಲ್ಲ ಹೆಚ್ಚಿನಮಟ್ಟಿಗೂ ತ್ರಿಪದಿಗಳು. ಕೆಲವೆಡೆ ಒಂದೊಂದು ಪಾದ ಕಳಚಿಕೊಂಡವು; ಏಳೆಗಳು. ಶೋಭಾನೆಗಳ ವೈಪುಲ್ಯ ನಮಗೆ ದೊರೆಯುವುದು ಬ್ರಾಹ್ಮಣ ವರ್ಗದಲ್ಲಿ. ಇದಕ್ಕೆ ಕಾರಣಗಳಿವೆ—ಬ್ರಾಹ್ಮಣ ವರ್ಗದವರ ಶುಭ ಸಮಾರಂಭಗಳು ಬಹು. ಮದುವೆ, ಹಬ್ಬ, ನೋಂಪಿಗಳು ಮಾತ್ರವಲ್ಲದೆ, ಪೂಜೆ,

---

12. ಡಿ. ಎಲ್. ನರಸಿಂಹಾಚಾರ್, ಪೀಠಿಕೆಗಳು, ಲೇಖನಗಳು (1971)–ಪುಟ 687.

13. ಪ್ರೊ|| ಆರ್. ಸತ್ಯನಾರಾಯಣ–'Dhavala' a hoary musical form of Karnataka ಎಂಬ ಲೇಖನ, The Bihar Theatre ಎಂಬ ಗ್ರಂಥದಲ್ಲಿ.

ಹೋಮ, ನೇಮಗಳು, ಗರ್ಭಾಧಾನ, ಸೀಮಂತ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚವಲ, ಉಪನಯನ—ಮುಂತಾದ ಹಲವಾರು ಶುಭಸಂಸ್ಕಾರಗಳಿರುತ್ತವೆ. ಇವು ಶ್ರುತಿ ಸ್ಮೃತಿಗಳ ಆಧಾರದಿಂದ ವೇದೋಕ್ತ ಮಂತ್ರಪೂರ್ವಕ ಪ್ರಭಾವಿಯಾಗಿ ಶಾಸ್ತ್ರಾನುಸಾರಿಯಾಗಿ ನಡೆಯುತ್ತವೆ. ರೂಢಿ, ಶಾಸ್ತ್ರ ಎಂಬೆರಡರ ಮೇಳವಿಲ್ಲಿರುತ್ತದೆ. ಪ್ರತಿಯೊಂದು ಶುಭ ಸಂಸ್ಕಾರದ ಕ್ರಿಯಾತಂತ್ರ ವೇದೋಕ್ತವಾಗಿ ನಡೆಯುವಾಗಲೇ ಈ ಶೋಭಾನೆಗಳನ್ನು ಹಾಡಲಾಗುತ್ತದೆ. ಇದರಿಂದ ಇವು ಕನ್ನಡದ ಮಂತ್ರಗಳ ಸ್ಥಾನ ಪಡೆಯುತ್ತವೆ; ಮಂತ್ರಹೀನರಿಗೂ ಅನುಕರಣೀಯವಾಗುತ್ತವೆ. ಈ ಹಾಡುಗಳ ವೈವಿಧ್ಯ ಉದಾಹರಿಸಿದಷ್ಟೂ ಮುಗಿಯದು, ವಿವರಿಸಿದಷ್ಟೂ ಅಪೂರ್ಣವೆ. ಉದಾಹರಣೆಗಾಗಿ ಮದುವೆ ಹಾಡುಗಳ ವಿಷಯವನ್ನು ತೆಗೆದುಕೊಂಡರೆ:—ಹೆಣ್ಣು ಕೇಳಿದ್ದು, ಕೇಳಿದ್ದಕ್ಕೆ ಉತ್ತರ, ನಿಶ್ಚಯ ತಾಂಬೂಲ, ನಾಂದಿ, ಕೇರಿ ಕರೆದದ್ದು, ಪತ್ರ ಬರೆದದ್ದು, ಅಕ್ಷತೆ ಕಲಸಿದ್ದು, ಅಕ್ಕಿ ತೊಳಸಿದ್ದು, ಸಮಾವರ್ತನೆ, ಕಾಶೀ ಪ್ರಯಾಣ, ದಿಬ್ಬಣ ಹೊರಟದ್ದು, ಬಿಡಾರ ಕೇಳದ್ದು, ಬಿಡಾರ ಕೊಟ್ಟದ್ದು, ದಿಬ್ಬಣ ಇದಿರುಗೊಂಡದ್ದು, ಪಾದ ತೊಳೆದದ್ದು, ಸತ್ಕರಿಸಿದ್ದು, ಮಂತ್ರ ಬಿನ್ನಪ, ಅಳಿಯನ ನೋಡಿದ್ದು, ಒಳಗೆ ಹೋದದ್ದು, ಮಧುಪರ್ಕ, ಚಿನ್ನ ಸೀರೆ ಇಟ್ಟದ್ದು, ವಧು ಶೃಂಗರಿಸಿದ್ದು, ಮಂಟಪಕ್ಕೆ ಬಂದದ್ದು, ತೆರೆ ಹಿಡಿದದ್ದು, ಮಂಗಲಾಷ್ಟಕ ಹೇಳಿದ್ದು, ಮಾಲೆ ಹಾಕಿದ್ದು—ಹೀಗೆ ನೂರಾರು ಕ್ರಿಯಾತಂತ್ರಗಳು ಶೋಭಾನೆ ಹಾಡಿನ ನಿನದದೊಂದಿಗೆ ನಡೆಯುತ್ತವೆ. ಇತರ ಸಂಸ್ಕಾರಗಳಿಗೆ, ಹಬ್ಬಗಳಿಗೆ ಸಂಬಂಧಿಸಿಯೂ ಇರುವ ಕ್ರಿಯಾತಂತ್ರದೊಡನೆ ಶೋಭಾನೆಗಳಿರುತ್ತವೆ. ಈ ಹಾಡುಗಳಲ್ಲಿ ರಾಮಾಯಣ, ಮಹಾಭಾರತ, ಪುರಾಣಗಳ ಕಥಾಸನ್ನಿವೇಶಗಳೂ ಬರುತ್ತವೆ. ಇವನ್ನೆಲ್ಲ ಸಂಗ್ರಹಿಸಿ, ವರ್ಗೀಕರಿಸಿ, ಉದಾಹರಿಸಿ, ವಿವರಿಸಿ, ಸಮೀಕ್ಷೆ ನಡೆಸುವ ಕಾರ್ಯ ಆಗದಿರುವುದು ಈ ಕ್ಷೇತ್ರದ ದೊಡ್ಡದೊಂದು ಕೊರತೆಯೇ ಸರಿ. ಛಂದಸ್ಸಿನ ಮಾದರಿಗಾಗಿ ಕೆಲವು ಶೋಭನಗೀತಗಳಿಂದ ಒಂದೊಂದು ಸೊಲ್ಲನ್ನಿಲ್ಲಿ ಉದಾಹರಿಸಲಾಗುವುದು :—

**ಸಿದ್ಧಿ ವಿನಾಯಕನನ್ನು ಬೇಡುವುದು**—ಹಾಡಿನ ಒಂದು ಸೊಲ್ಲಿದು (ತ್ರಿಪದಿ)

ಸಿದ್ಧಿ ವಿನಾಯಕ ಸಿದ್ಧಿಯನು ಮಾಡಯ್ಯ
ಸಿಬ್ಬಲುಂಡಲಿಗೆ ನಿನಗೀವೆ
ನಿನಗೀವೆ ಗಣನಾಥ
ಶೀಘ್ರದಲಿ ಮತಿಯ ಕರುಣಿಸು ‖

**ಹೆಣ್ಣು ಕೇಳಿದ್ದು**—ಶಿವನಿಗೆ ಗಿರಿಜೆಯನ್ನು (ನಾಲ್ಕು ಪಾದಗಳು)

ಕೊಡಬೇಕು ಗಿರಿಜೆಯನ್ನು, ಕೈಲಾಸದ
ಮೃಡನಿಗೆ ತರಳೆಯನ್ನು
ಕೊಡಬೇಕು ಗಿರಿಜೆಯ ಮೃಡಮಹೇಶ್ವರನಿಗೆ
ಕಡುಮೋಹದಿಂದ ಸಾಕಿದ ನಿನ್ನ ಮಗಳ ‖

**ಸಮಾವರ್ತನೆಯ ಹಾಡು**—ಪಂಚಪದಿ, ನಾಲ್ಕು ಮಾತ್ರೆಗಳ ಗಣ, ಕೊನೆಯ ಸಾಲು ತ್ರಿಪದಿಯ ಕೊನೆಯ ಸಾಲಿನಂತೆ.

ಶ್ರೀ ಗಜವದನನ ಚರಣಕೆ ಮಣಿದು
ವಾಗೀಶ್ವರಿ ಪದಯುಗಳವ ನೆನೆದು
ನಾಗಶಯನನ ವಿವಾಹಕೆಂದೆನುತನು
ರಾಗದಿಂದಲಿ ಸಮಾವರ್ತನೆಯನು ಗೈ
ದಾಗಮುವ ಪಾಡಿ ಪೊಗಳುವೆ ||

**ಮಾಲೆ ಹಾಕಿದ್ದು**– (ಹರನು ಗೌರಿಗೆ)

ಹರನು ಮಾಲೆಯನ್ಹಾಕಿದ ಶ್ರೀಗೌರಿಗೆ
ಶಿವನು ಮಾಲೆಯನ್ಹಾಕಿದ
ಜಡೆಯ ಶಂಕರ ತನ್ನ ಮಡದಿಯ ಮುಖನೋಡಿ
ಗುಡಜೀರಿಗೆಯ ತೀವಿ ಕಡುಮೋಹದಿಂದಲಿ ||

**ಪಾರಿಜಾತದ ಹಾಡು**—ಕತೆಹಾಡು (ಅಂಶಗಣ, ನಾಲ್ಕು ಪಾದ)

ಸುರಪಾರಿಜಾತ ಬಂತೆಲ್ಲಿಂದ ಧರಣಿಗೆ
ಕರುಣಿಸಿ ಎನಗದನರುಹಬೇಕು
ಕರುಣಿಸಿ ಎನಗದನರುಹಬೇಕೆನೆ ಕೇಳಿ
ಹರುಷದಿ ನುಡಿದನು ಮುನಿವರನು । ಕೃಪೆಯಿಂದ ||

**ಬಾಗಿಲು ತಡೆಯುವುದು** (ಧವಳಾರ) ನವಪದಿ. ಕೃಷ್ಣನು ರುಕ್ಮಿಣಿಯನ್ನು ವರಿಸಿ ದ್ವಾರಕಿಗೆ ಬಂದು ಆಕೆಯೊಡನೆ ಒಳಹೊಗುವಾಗ ಸೌಭದ್ರೆ ತಡೆಯುತ್ತಾಳೆ.

ವಲ್ಲಭೆಯನು ಕರಕೊಂಡು ವಿನೋದದಿ
ಎಲ್ಲಿಗೆ ಗಮನವಿನ್ನು । ಅಣ್ಣಯ್ಯ ಕೇಳ್
ನಿಲ್ಲೊಂದು ಮಾತುಂಟಿನ್ನು । ಈ ಲೋಕದೊ
ಳಿಲ್ಲದ ನಡತೆಯನ್ನು, ತಿಳಿದವನು ನೀನು
ಎಲ್ಲ ಲೋಕಕ್ಕೊಡೆಯ ಲಕ್ಷ್ಮೀ
ವಲ್ಲಭನೆ ನೀನೊಲಿದು ಕಡುಕೃಪೆ
ಯಲ್ಲಿ ಎನಗಿಷ್ಟವನು ಈ ಕ್ಷಣ
ದಲ್ಲಿ ಪಾಲಿಸುವನಕ ಕದ ಬಿಡೆ
ದಯಮಾಡಣ್ಣಯ್ಯ ಶ್ರೀಕೃಷ್ಣಯ್ಯ ||

**ದಿಬ್ಬಣ ಹೊರಟದ್ದು (ಏಕಾದಶಪದಿ) ತ್ರಿಪುಟತಾಳದ ಲಯವಿನ್ಯಾಸ.**

ಹತ್ತು ದೆಸೆಯಲಿ ಶೋಭಿಸುವ ನವ
ರತ್ನ ವಿಭವದಲಿ । ಮಿನುಗುವ
ವೃತ್ತಕುಚೆಯರ ಶೋಭನದ ರವ
ಹತ್ತು ದೆಸೆಗಳಲಿ । ಬೆಳಗಿಯೆ
ಕತ್ತಲೆಯ ಶತ್ರುವಿನವೊಲ್ ಬಹ
ಸತ್ತ್ವರೂಪದಲಿ ॥

ಉತ್ತಮನನುತ್ತಮರು ಧ್ಯಾನಿಸೆ
ಸುತ್ತಮುತ್ತಲು ಛತ್ರಚಾಮರ
ವೆತ್ತಿ ನಾನಾ ವಿಧದ ರಭಸದಿ
ಕತ್ತುರಿಯು ಮೊದಲಾದ ಪರಿಮಳ
ವಿಸ್ತಾರದಲ್ಲಿ ಪೊರಟರು ॥

**ಅಷ್ಟಮಿಯ ಕೃಷ್ಣನಿಗೆ ಆರತಿ** (ಸರಳಾರ)

ಗೋಪಿಯ ಕಂದ ಗೋಪಾಲಗೆ । ಚೆಲ್ವ
ಗೋವಳರಾಯಗಾರತಿಯೆತ್ತಿರೆ ॥ ಪಲ್ಲವಿ ॥

ಶ್ರಾವಣ ಮಾಸದಿ ಅಷ್ಟಮಿಯಿರುಳಲ್ಲಿ
ರೋಹಿಣಿಯಾ ನಕ್ಷತ್ರದಲ್ಲಿ
ದೇವಕೀದೇವಿಯು ಗರ್ಭದಿ ಜನಿಸಿದ
ದೇವ ಕೃಷ್ಣಯ್ಯಗಾರತಿಯೆತ್ತಿರೇ ॥

ಶೋಭನ ಗೀತಗಳಲ್ಲಿ ಒಂದೊಂದಕ್ಕೂ ವಿಶಿಷ್ಟ ಧಾಟಿಯಿದೆ; ಯತಿಸ್ಥಾನಗಳಿವೆ. ಕೆಲವಕ್ಕೆ ವಿಳಂಬ, ಮಧ್ಯಮ, ದ್ರುತ ಎಂಬ ಗತಿಗಳಿವೆ. ಈ ಹಾಡುಗಳಲ್ಲಿ ಪುರಾಣ ಕಥೆಗಳಿದ್ದರೂ ಅವನ್ನು ಲೌಕಿಕದಲ್ಲ ಅಳವಡಿಸಲಾಗಿದೆ. ಆದುದರಿಂದ ಸಮಾಜ ಚಿತ್ರಣಗಳೇ ಆಗುತ್ತವೆ. ಸುಖ ದುಃಖ, ನೋವು ನಲಿವುಗಳ ಅಭಿವ್ಯಕ್ತಿ ಈ ಹಾಡುಗಳಲ್ಲಿದೆ. ಮಾತಿನಲ್ಲಿ ರಸವಿದೆ; ಮನೋರಂಜನೆಯಿದೆ. ಅಧ್ಯಯನ ಯೋಗ್ಯ ವಿಷಯ ಸಮೃದ್ಧಿಯಿದೆ. ಈ ಸಾಹಿತ್ಯ ಜಾನಪದವೂ ಹೌದು; ಪ್ರೌಢವೂ ಹೌದು. ಕೆಲವು ಮಟ್ಟಿಗೆ ದಾಸರ ಪದ, ಯಕ್ಷಗಾನ ಪದಗಳ ಸರಿಸಾಟಿಗೆ ನಿಲ್ಲುವ ಶಿಷ್ಟಸಾಹಿತ್ಯವೆನ್ನಬಹುದು. ಹಾಗಿರುವುದೊಂದು ದೋಷವೇನೂ ಅಲ್ಲವಷ್ಟೆ? ○

# ಅಗ್ಗಳನನ್ನು ಕುರಿತು

## (ಒಂದು ಟಿಪ್ಪಣಿ)

—ಡಾ॥ ಎಂ. ಎಂ. ಕಲಬುರ್ಗಿ

ಚಂದ್ರಪ್ರಭ ಪುರಾಣದ ಕರ್ತೃ ಅಗ್ಗಳನ ಕಾಲ ೧೧೮೯. ಊರು ವಿಜಾಪುರ ಜಿಲ್ಲೆಯ ಇಂಗುಳೇಶ್ವರ. ಶಾಂತೀಶ-ವಾಚಾಂಬಿಕೆಯರು[1] ತಂದೆ-ತಾಯಿಗಳು. ಮೂಲಸಂಘ, ದೇಶೀಯ ಗಣ, ಪುಸ್ತಕಗಚ್ಛ, ಕೊಂಡಕುಂದಾನ್ವಯ ಶಾಖೆಯವನಾದ ಈತನ ಗುರು ಶ್ರುತಕೀರ್ತಿ ತ್ರೈವಿದ್ಯ.

ಇಂಗುಳೇಶ್ವರ ಒಂದು ಪ್ರಾಚೀನ ಜೈನಕೇಂದ್ರ. "ಇಂಗುಳೇಶ್ವರ ಬಳಿ" ಹೆಸರಿನ ಜೈನ ಪರಂಪರೆಯನ್ನೇ ತೆರೆದ ಕೀರ್ತಿ ಈ ಗ್ರಾಮದ್ದಾಗಿದೆ. ಶಾಸನಗಳಲ್ಲಿ ಈ 'ಇಂಗುಳೇಶ್ವರ ಬಳಿ'ಯ ಸೂಚನೆ ಅಗ್ಗಳನಿಗಿಂತ ಹಿಂದಿನಿಂದಲೂ ಕಂಡುಬರುತ್ತಿದ್ದು, ಅಗ್ಗಳ ಹೇಳಿರದಿದ್ದರೂ ಇಂಗುಳೇಶ್ವರದವನಾದ ಈತನದೂ ಇದೇ "ಬಳಿ" ಯಾಗಿರುವ ಸಾಧ್ಯತೆಯಿದೆ. ಇಷ್ಟು ಹಿನ್ನೆಲೆಯೊಂದಿಗೆ ಅಗ್ಗಳನ ಚರಿತ್ರೆಯ ಮೇಲೆ ಬೆಳಕು ಚೆಲ್ಲಬಹುದಾದ ಈ ಗ್ರಾಮದ ಎರಡು ಸಣ್ಣ ಶಾಸನಗಳನ್ನು[2] ಇಲ್ಲಿ ಪರಿಶೀಲಿಸಬಹುದು.

### ಶಾಸನ-೧ (ಕ್ರಿ. ಶ. ೧೧೬೦)

ನಿರುಪಮ ಮಲ್ಲಿನಾಥ ಜಿನನಾಥ ಶಿಲಾಮಯ ಗೇಹಮಂ ಸುರೇ ।
ಶ್ವರಮಣಿಗೇಹಮೆಂದೆನಿಸಿ ಮಾಡಿಸಿದಪ್ಪುದಪಿಂದಮಿಂಗಳೇ ।
ಶ್ವರಪುರನಾಥ ಶಶಿನಾಥ ವಿರಾಜಿತ ತೀರ್ತ್ಥನಾಥಮಂ ।
ದಿರದೆ ಪುರೋವಿಭಾಗ ಹರಿದಿಕ್ತಟದೊಳು ವಿಭುಶಾಂತಿಪಂಡಿತರು ॥

ತಳೆದೆಂ ಪ್ರಮಾದಿ ವತ್ಸ[ರ್ಮ]ಂ ।
ಮಾಘುದೆ ಬಹುಳ ಷಷ್ಠಿಸಿತವಾರದೊಳು ।
ಜ್ವಳಿಪದ್ದೋರ್ದಯದೊಳು ವಿಭು ।
ವಿಳಾಸದಿಂ ಶಾಂತಿದೇವಮುನಿ ಸುರಪದಮಂ ॥

### ಶಾಸನ-೨ (ಕ್ರಿ. ಶ. ೧೨೧೨)

ಸ್ಥಿರತೆಯನೊಪ್ಪುತಿರ್ದ್ದ ಜಿನದರ್ಶನ ಸದ್ವ್ರತ ಸಚ್ಚರಿತ್ರದಿಂ ।
ಪರಮಜಿನಾಭಿ[ಶೇಕ]ವರಪೂಜನದಿಂ ನುತ ಸಂಘದಾನದಿಂ ।

---

1. ಕರ್ನಾಟಕ ಕವಿಚರಿತೆಯಲ್ಲಿ 'ಪೋಚಾಂಬಿಕೆ' ಎಂದು ಕಂಡುಬರುತ್ತದೆ.
2. SII. xv 544 ಮತ್ತು 605.

ಸುರುಚಿರಕೀರ್ತಿಮೂರ್ತಿ ಸುಜನಂ ಗುಣಿಯಗ್ಗಳಸೆಟ್ಟಿಯಾ[ತ್ಮ]ಜಂ ।
ಪರಸು ನಿಜಾಯುಮಂ ತಳೆದು ಭವ್ಯಜನಾಗ್ರಣಿ ಶಾನ್ತನೊಪ್ಪಿದಂ ॥
ಒಪ್ಪಿ ಬಳಿಕ್ಕೆ ದೇವಗತಿಗೊಪ್ಪಿರೆ ಸಂದನಮರ್ತ್ಯಲೋಕದೊಳು ।
ತಪ್ಪದೆ ಜೈನಮಂದಿರ ನಿಕಾಯಮನರ್ತ್ಥಿಯೆ ಬಂದಿಪಂದದಿಂ ।
ಮುಪ್ಪು ರುಜಾದಿಯಿಲ್ಲದೆ ಸುಸೌಖ್ಯಮನುಣ್ಬನು ರಾಗಭಾವದಿಂ ।
ಕಪ್ಪುರಪುಂಜದಂತೆ ಸಲೆ ಕಾಯಮನರ್ತ್ಥಿಪ ಶಾನ್ತನುತ್ತಮಂ ॥
ಯೆಸೆದಿರಲುತ್ತಮಾಂಗಿರದ ಚೈತ್ರದ ಪಾಡಿವ ಸೋಮವಾರದೊಳು ।
ಪಸರಸೆಯಾತ್ಮಭಾವನ ಸಮಾಧಿಯೊಳೊಂದಿರೆ ದೇವಲೋಕಮಂ ।
ಪಾ[ಲಿ]ಸಲೆನೆ ಸಾಂತಿಸೆಟ್ಟಿ ಜಗಮೊಪ್ಪಿರೆ ಬಣ್ಣಿಸೆ ಪೊಕ್ಕನುನ್ನತಂ ।
ಮಿಸಮಿಸಮಾಸ್ತಸನ್ನಿಭ...ಪ ಸುರಬ್ರಜ ಭೋಗದರ್ತ್ಥಿಗಂ ॥

ಇಲ್ಲಿಯ ಪ್ರಥಮ ಶಾಸನ (೧೧೬೦) ಶಾಂತಿಪಂಡಿತನನ್ನು (ಶಾಂತಿದೇವ ಮುನಿ), ದ್ವಿತೀಯ ಶಾಸನ (೧೨೧೨) ಅಗ್ಗಳಸೆಟ್ಟಿಯ ಮಗ ಶಾಂತನನ್ನು (ಶಾಂತಿ ಸೆಟ್ಟಿ) ಉಲ್ಲೇಖಿಸುತ್ತಿದ್ದು ಇವುಗಳಿಂದ

ಶಾಂತಿಪಂಡಿತ (೧೧೬೦)
|
ಅಗ್ಗಳಸೆಟ್ಟಿ
|
ಶಾಂತಿಸೆಟ್ಟಿ (೧೨೧೨)

ಎಂಬ ವಂಶಾವಳಿ ಹೊರಡುವ ಸಾಧ್ಯತೆಯಿದೆ. ಇಲ್ಲಿ ಅಜ್ಜನ ಹೆಸರನ್ನು ಮೊಮ್ಮಗನಿಗೆ ಇಟ್ಟಿರಬಹುದಾಗಿದೆ. ಇಂಗಳೇಶ್ವರದವನಾದ ಕವಿ ಅಗ್ಗಳನ ತಂದೆ ಶಾಂತೀಶ, ಈತನ ಚಂದ್ರಪ್ರಭ ಪುರಾಣದ ಕಾಲ ೧೧೮೯ ಎಂಬುದನ್ನು ನೆನೆದರೆ ಶಾಸನೋಕ್ತ ಅಗ್ಗಳಸೆಟ್ಟಿ, ಚಂದ್ರಪ್ರಭ ಪುರಾಣದ ಕರ್ತೃ ಅಗ್ಗಳ ಒಬ್ಬನೇ ಎನ್ನಲು ಮನಸ್ಸಾಗುತ್ತದೆ. ಇದರಿಂದ ಈ ಕೆಳಗಿನ ನಿರ್ಣಯಗಳಿಗೆ ಬರಬಹುದಾಗಿದೆ.

ಕವಿ ಅಗ್ಗಳ ಜೈನ ವ್ಯಾಪಾರೀ ಕುಟುಂಬಕ್ಕೆ ಸಂಬಂಧಿಸಿದ ಶೆಟ್ಟಿಯಾಗಿದ್ದಾನೆ. ಈತನ ತಂದೆ ಶಾಂತಿಪಂಡಿತನು ಇಂಗುಳೇಶ್ವರದ ಚಂದ್ರಪ್ರಭ (ಶಶಿನಾಥ) ಬಸದಿಯ ಮುಂಭಾಗದಲ್ಲಿ ಮಲ್ಲಿನಾಥ ಬಸದಿಯನ್ನು ಕಟ್ಟಿಸಿದ್ದು ಇವನ ಹೆಸರಿನ ಮುಂದಿರುವ 'ಪಂಡಿತ' ಬಿರುದು ಗಮನಾರ್ಹವಾಗಿದೆ. ಈ ಶಾಂತಿಪಂಡಿತ ಮರಣಕಾಲಕ್ಕೆ ಮುನಿಯಾಗಿದ್ದು, ಅರ್ಘೋದಯ ಮುಹೂರ್ತದಲ್ಲಿ ತೀರಿಕೊಂಡನು. ಅಗ್ಗಳನ ಮಗನಾದ ಶಾಂತನಿಗೆ ಅಜ್ಜನ ಹೆಸರನ್ನು ಇಡಲಾಗಿದ್ದು, ಈತನು ಸಮಾಧಿಮರಣದಿಂದ ತೀರಿಕೊಂಡನು.

ಈ ಎಲ್ಲ ಸಂಗತಿಗಳು ನಮಗೆ ಅಗ್ಗಳನ ವಿಷಯವಾಗಿ ಇನ್ನೂ ಆಸಕ್ತಿ ಹುಟ್ಟಿಸುತ್ತಿದ್ದು, ವಿದ್ವಾಂಸರು 'ಇಂಗುಳೇಶ್ವರ ಬಳಿ'ಯ ಅಭ್ಯಾಸದೊಂದಿಗೆ

ಇಂಗುಳೇಶ್ವರ ಗ್ರಾಮದ ಕ್ಷೇತ್ರಕಾರ್ಯವನ್ನೂ ಕೈಕೊಳ್ಳಬಹುದಾಗಿದೆ. ನಾಗಚಂದ್ರನು ಅಗ್ಗಳನ ಗುರು ಶ್ರುತಕೀರ್ತಿತ್ರೈವಿದ್ಯನನ್ನು ಸ್ಮರಿಸಿದುದು, ಈ ಇಬ್ಬರೂ ಕವಿಗಳ ಜೈನ ಶಾಖಾ ಪರಂಪರೆ ಒಂದೇ ಆಗಿರುವುದು, ನಾಗಚಂದ್ರನ ಮೊಮ್ಮಗನಾಗಿರಬಹುದಾದ ಬ್ರಹ್ಮಶಿವನು ಅಗ್ಗಳನ ಸ್ನೇಹಿತನಾಗಿರುವುದು, ನಾಗಚಂದ್ರನು ವಿಜಾಪುರದಲ್ಲಿಯೂ, ಅಗ್ಗಳನ ತಂದೆ ಇಂಗುಳೇಶ್ವರದಲ್ಲಿಯೂ ಮಲ್ಲಿನಾಥ ಬಸದಿ ಕಟ್ಟಿಸಿದುದು —ಇತ್ಯಾದಿ ಸಂಗತಿಗಳು ಈ ಇಬ್ಬರೂ ಕವಿಗಳನ್ನು ತೀರ ಹತ್ತಿರಕ್ಕೆ ತರುತ್ತವೆ. "ನಿಜ ವಿಭವೋದಯಂ ಸಫಲಮಾಯ್ತು" ಎಂಬಂಥ ಶ್ರೀಮಂತಿಕೆ ವ್ಯಾಪಾರದಿಂದಲೇ ನಾಗಚಂದ್ರ ಕುಟುಂಬಕ್ಕೆ ಪ್ರಾಪ್ತವಾಗಿದ್ದರೆ ಅಗ್ಗಳನಂತೆ ನಾಗಚಂದ್ರನೂ ಜೈನ ಶೆಟ್ಟಿಯಾಗಿರುವ ಸಾಧ್ಯತೆಯಿದೆ. ○

# ಸದ್ಭಕ್ತ ಸದ್ವೀರ ಮಾಹೇಶ್ವರನ ಸತ್ಕ್ರಿಯಾ ಸಮ್ಯಜ್ಞಾನ ಸಮರಸ ಭಕ್ತಿ ನಿಜಾಚರಣೆ ವಚನ

(ಒಂದು ಟಿಪ್ಪಣಿ)

—ಎಸ್. ಶಿವಣ್ಣ

'ಸದ್ಭಕ್ತ....ವಚನ' ಸಂಕಲನ ಪ್ರಕಾರಕ್ಕೆ ಸಂಬಂಧಿಸಿದ ಕೃತಿ. ಇದರ ಕರ್ತೃ ಅಜ್ಞಾತ. ಇದರಲ್ಲಿ ಒಟ್ಟು 76 ವಚನಗಳಿವೆ. ಆದರೆ ಉಪಲಬ್ಧ ಪ್ರತಿ ಅಪೂರ್ಣವಾಗಿದೆ. ಕೃತಿಯ ಕ್ರಮಾಂಕ 21–28ನೆಯ ವಚನಗಳು ಲುಪ್ತವಾಗಿವೆ. ಉಪಲಬ್ಧ ಭಾಗದಲ್ಲಿ 32 ಮಂದಿ ಶಿವಶರಣಶರಣೆಯರ ವಚನಗಳಿವೆ.

ಇಲ್ಲಿನ ವಚನಗಳಲ್ಲಿ ಬಸವ, ಚೆನ್ನಬಸವ, ಪ್ರಭುದೇವ ಮೊದಲಾದವರ ವಚನಗಳು ವಚನ ಪರಂಪರೆಯ ಪ್ರಾರಂಭದ ಕಾಲಕ್ಕೆ ಸಂಬಂಧಿಸಿವೆ. ಅದರಂತೆ ಷಣ್ಮುಖಸ್ವಾಮಿ (ಸು. 1700) ಹಾಗೂ ಕಾಡಸಿದ್ಧೇಶ್ವರರ (ಸು. 1725) ವಚನಗಳು ವಚನರಚನೆಯ ಇತ್ತೀಚಿನ ಕಾಲಮಾನಕ್ಕೆ ಸೇರಿವೆ. ಹೀಗಾಗಿ ಈ ವಚನ ಸಂಕಲನ ಪ್ರಾಯಶಃ ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ ಆಗಿರಬಹುದೆಂದು ತಾತ್ಕಾಲಿಕವಾಗಿ ನಿರ್ಧರಿಸಬಹುದಾಗಿದೆ.

ನಮಗೆ ತಿಳಿದಿರುವಂತೆ ಅಖಂಡೇಶ್ವರ ಹಾಗೂ 'ಅಪ್ರಮಾಣ ಕೂಡಲ ಸಂಗಮದೇವ' ಅಂಕಿತದ ವಚವಗಳು ಮೊದಲ ಬಾರಿಗೆ ಪ್ರಸ್ತುತದ ವಚನ ಸಂಕಲನದಲ್ಲಿ ಉಲ್ಲೇಖಗೊಂಡಿವೆ.

ಈ ಸಂಕಲನದ ಕಾಗದದ ಪ್ರತಿಯೊಂದು ಚಿತ್ರದುರ್ಗದಲ್ಲಿನ 'ಹುಲ್ಲೂರು ಶ್ರೀನಿವಾಸ ಜೋಯಿಸರ ಪ್ರಾಚ್ಯ ಸಂಶೋಧನಾಲಯ'ದಲ್ಲಿದೆ. ಈ ಪ್ರತಿಯನ್ನು ಉಪಯೋಗಿಸಿಕೊಳ್ಳಲು ಒಪ್ಪಿಗೆ ನೀಡಿದ ಶ್ರೀ ಪಾಂಡುರಂಗ ಜೋಯಿಸ್ ಅವರಿಗೆ ನನ್ನ ಕೃತಜ್ಞತೆಗಳು.

## ಅನುಬಂಧ

| ಕ್ರಮ ಸಂಖ್ಯೆ | ವಚನಾಂಕಿತ | ವಚನಕಾರ/-ಕಾರ್ತಿ | ಕಾಲ | ವಚನ ಸಂಖ್ಯೆ |
|---|---|---|---|---|
| ೧. | ಅರ್ಕೇಶ್ವರಲಿಂಗ | ಮಧುವಯ್ಯ | ಸು. 1160 | 2 |
| ೨. | ಅಖಂಡೇಶ್ವರ | ಷಣ್ಮುಖಸ್ವಾಮಿ | ಸು. 1700 | 2 |
| ೩. | ಅಪ್ರಮಾಣ ಕೂಡಲಸಂಗಮದೇವ | ? | ? | 1 |
| ೪. | ಅಮುಗೇಶ್ವರ | ಅಮುಗೆ ರಾಯಮ್ಮ | ಸು. 1160 | 1 |

| | | | | |
|---|---|---|---|---|
| ೫. | ಅಲೇಖನಾದ ಶೂನ್ಯಕಲ್ಲಿನೊಳಗಾದ | ಭಂಡಾರಿ ಶಾಂತರಸ | ಸು. 1160 | 1 |
| ೬. | ಅಂಬಿಗರ ಚೌಡಯ್ಯ | ಅಂಬಿಗರ ಚೌಡಯ್ಯ | ಸು. 1160 | 3 |
| ೭. | ಆಚಾರವೇ ಪ್ರಾಣವಾದ ರಾಮೇಶ್ವರಲಿಂಗ | ಅಕ್ಕಮ್ಮ | ಸು. 1160 | 1 |
| ೮. | ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗ | ಶಿವಲೆಂಕ ಮಂಚಣ್ಣ | ಸು. 1160 | 1 |
| ೯. | ಉರಿಲಿಂಗಪೆದ್ದಿಗಳರಸ | ಕಾಳವ್ವೆ | | 1 |
| ೧೦. | ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರ | ಉರಿಲಿಂಗಪೆದ್ದಿ | | 1 |
| ೧೧. | ಏಲೇಶ್ವರಲಿಂಗ | ಏಲೇಶ ಕೇತಯ್ಯ | ಸು. 1160 | 1 |
| ೧೨. | ಕಲಿದೇವರ ದೇವ | ಮಡಿವಾಳ ಮಾಚಯ್ಯ | ಸು. 1160 | 15 |
| ೧೩. | ಕಾಡಿನೊಳಗಾದ ಶಂಕರಪ್ರಿಯ ಚೆನ್ನಕದಂಬ ಲಿಂಗ ನಿರ್ಮಾಯ ಪ್ರಭುವೇ | ಕಾಡಸಿದ್ಧೇಶ್ವರ | ಸು. 1725 | 1 |
| ೧೪. | ಕೂಡಲ ಚೆನ್ನಸಂಗಮದೇವ | ಚೆನ್ನಬಸವಣ್ಣ | ಸು. 1160 | 5 |
| ೧೫. | ಕೂಡಲ ಸಂಗಮದೇವ | ಬಸವಣ್ಣ | ಸು. 1160 | 3 |
| ೧೬. | ಗುಹೇಶ್ವರ | ಅಲ್ಲಮಪ್ರಭು | ಸು. 1160 | 2 |
| ೧೭. | ಗೂಡಿನ ಗುಮ್ಮಟನಾಥನೊಡೆಯ ಅಗಮ್ಯೇಶ್ವರ ಲಿಂಗ | ಮನುಮುನಿ | ಸು. 1160 | 1 |
| ೧೮. | ಘನಲಿಂಗಿಯ ಮೋಹದ ಚೆನ್ನಮಲ್ಲಿಕಾರ್ಜುನ | ಘನಲಿಂಗಿದೇವ | ಸು. 1560 | 3 |
| ೧೯. | ಚಿಕ್ಕಯ್ಯಪ್ರಿಯಸಿದ್ಧಲಿಂಗ | ಘಟ್ಟಿವಾಳ ಮುದ್ದಣ್ಣ | ಸು. 1160 | 2 |
| ೨೦. | ನಾರಾಯಣ ಪ್ರಿಯ ರಾಮನಾಥ | ಗುಪ್ತಮಂಚಣ್ಣ | ಸು. 1160 | 2 |
| ೨೧. | ನಿಷ್ಕಳಂಕ ಮಲ್ಲಿಕಾರ್ಜುನ | ಮೋಳಿಗೆ ಮಾರಯ್ಯ | ಸು. 1160 | 1 |
| ೨೨. | ನಿಃಕಳಂಕ ನಿರ್ಮಾಯ ಪ್ರಭುವೇ | ? | ? | 2 |
| ೨೩. | ಬಂಕೇಶ್ವರ | ಸುಂಕದ ಬಂಕಣ್ಣ | ಸು. 1160 | 3 |
| ೨೪. | ಭಾಪುರೆ ಲದ್ದೆ ಸೋಮ | ಲದ್ದೆಯ ಸೋಮಯ್ಯ | ಸು. 1160 | 1 |
| ೨೫. | ಮಸಣಯ್ಯ ಪ್ರಿಯ ಮಾರೇಶ್ವರಲಿಂಗ | ? | ? | 1 |
| ೨೬. | ಮಹಾಲಿಂಗ ಕಲ್ಲೇಶ್ವರ | ಹಾವಿನ ಹಾಳ ಕಲ್ಲಿದೇವ | ಸು. 1180 | 1 |
| ೨೭. | ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ | ತೋಂಟದ ಸಿದ್ಧಲಿಂಗ | ಸು. 1561 | 2 |
| ೨೮. | ರೇಕಣ್ಣಪ್ರಿಯ ನಾಗಿನಾಥ | ಬಹುರೂಪಿ ಚೌಡಯ್ಯ | ಸು. 1160 | 2 |
| ೨೯. | ಶಂಭುವಿಂದತ್ತ ಸ್ವಯಂಭುವಿಂದಿತ್ತ ಅತಿಬಳ ನೋಡ ಮಾತುಳಂಗ ಮಧುಕೇಶ್ವರ | ದಾಸೋಹದ ಸಂಗಣ್ಣ | ಸು. 1160 | 1 |
| ೩೦. | ಸದಾಶಿವಮೂರ್ತಿ ಲಿಂಗ | ಅರಿವಿನ ಮಾರಿತಂದೆ | ಸು. 1300 | 3 |
| ೩೧. | ಸಿಮ್ಮಲಿಗೆ ಚೆನ್ನರಾಮ | ಚಂದಿಮರಸ | ಸು. 1140 | 2 |
| ೩೨. | ಸೊಡ್ಡಳ | ಸೊಡ್ಡಳ ಬಾಚರಸ | ಸು. 1160 | 1 |

# ಹರಿಕಥೆಯ ಉಗಮ

—ಡಾ॥ ಎಂ. ಚಿದಾನಂದ ಮೂರ್ತಿ

ಅರೆ ಜಾನಪದ ಕಲೆಯಾದ ಹರಿಕಥೆ (ಹರಿಕಥಾ ಪ್ರಸಂಗ, ಕೀರ್ತನ್, ಹರಿಕಥಾ ಕೀರ್ತನ್, ಕಥಾಕಾಲಕ್ಷೇಪ) ಉಗಮವಾದುದು ಎಲ್ಲಿ? ಯಾವಾಗ? ಅದರ ಉಗಮಕ್ಕೆ ಮೂಲ ಪ್ರಚೋದನೆ ಯಾವುದು? ಅದರ ಅರೆ ಜಾನಪದ ಲಕ್ಷಣಕ್ಕೆ ಕಾರಣವೇನು? ಈ ಸಮಸ್ಯೆಗಳ ಕಡೆ ತೀವ್ರ ಗಮನವನ್ನು ಯಾರೂ ಹರಿಸಿದಂತೆ ಕಾಣುವುದಿಲ್ಲ. ತಮಿಳು ಮತ್ತು ತೆಲುಗು ವಿದ್ವಾಂಸರು ಆ ಕಲೆಯು ಮಹಾರಾಷ್ಟ್ರದಿಂದ ತಮ್ಮ ಪ್ರದೇಶಗಳಿಗೆ ಬಂದಿತೆಂದು ಒಪ್ಪಿಕೊಳ್ಳುತ್ತಾರೆ. ತೆಲುಗು, ತಮಿಳುಗಳಲ್ಲಿ ಯಾವುದೇ ಪ್ರಾಚೀನ ಉಲ್ಲೇಖವೂ ಆ ಕಲೆಯ ಬಗ್ಗೆ ದೊರಕುವುದಿಲ್ಲ. ಕ್ರಿ. ಶ. 1841-1903ರಲ್ಲಿದ್ದ ತಂಜಾವೂರು ಕೃಷ್ಣಭಾಗವತರೂ, ಧೂಳತಾಳಿ ಕೃಷ್ಣಕವಿಯೂ (ಕ್ರಿ. ಶ. 1809-99) ತಮಿಳುನಾಡು ಮತ್ತು ಆಂಧ್ರಪ್ರದೇಶಗಳ ಮೊದಲ ಹರಿಕಥಾ ದಾಸರೆಂದು ಹೇಳುತ್ತಾರೆ. ಮರಾಠಿ ವಿದ್ವಾಂಸರು ಕ್ರಿ. ಶ. 1300-1350ರಲ್ಲಿದ್ದ ಸಂತ ನಾಮದೇವ ಎಂಬ ವಿಷ್ಣು ಭಕ್ತನೇ ಮೊದಲ ಕೀರ್ತನಕಾರನೆಂದು ನಂಬುತ್ತಾರೆ. ಆದರೆ, ಅವನ ಕೃತಿಗಳಲ್ಲಿ ಎಲ್ಲಿಯೂ ಒಂದು ಕಲೆಯಾಗಿ ಹರಿಕಥೆಯ ಉಲ್ಲೇಖವಾಗಲಿ ಸೂಚನೆಯಾಗಲಿ ಇಲ್ಲ. "ನಾವು ಕೀರ್ತನ ಮಾಡುತ್ತ ಕುಣಿಯೋಣ" (ಅಭಂಗ 47), "ಅವರು ಕೀರ್ತನ ಮಾಡಬಹುದು, ಆದರೆ ಭಗವಂತನನ್ನು ಕಾಣಲಾರರು" (ಅಭಂಗ 75), "ಕೈಯಲ್ಲಿ ವೀಣೆ ಹಿಡಿದು, ಬಾಯಿ ತುಂಬ ದೇವರ ಹೆಸರನ್ನು ತುಂಬಿಕೊಂಡು, ದೇವಾಲಯದಲ್ಲಿ ನಾನು ನಿಲ್ಲುತ್ತೇನೆ...." (ಅಭಂಗ 77)[1] ಇಂತಹ ಉಲ್ಲೇಖಗಳು ಎಲ್ಲಾ ಕಾಲದ ಭಕ್ತಿಸಾಹಿತ್ಯದಲ್ಲಿಯೂ ಕಾಣುತ್ತವೆ. "ನಾವು", "ಅವರು" ಎಂಬ ಬಹುವಚನಗಳು ಭಗವಂತನನ್ನು ಕೀರ್ತಿಸುವುದನ್ನು, ಅವನ ನಾಮಸಂಕೀರ್ತನವನ್ನು ಹೇಳುತ್ತವೆಯೇ ಹೊರತು ಹರಿಕಥೆಯನ್ನಲ್ಲ. ಹರಿಕಥೆ ಬರಿಯ ನಾಮೋಚ್ಚಾರವಲ್ಲ; ಹಾಡು, ಅಭಿನಯ, ವಿವರಣೆ, ಕಥೆಗಳ ಪ್ರಕ್ಷೇಪ, ತಮಾಷೆ ಇತ್ಯಾದಿಗಳ ಮೂಲಕ ಒಂದು ಕತೆಯ ನಿರೂಪಣೆ, ತನ್ಮೂಲಕ ನೀತಿಬೋಧೆ. "ಅದು ಏಕವ್ಯಕ್ತಿಯ ರಂಗಭೂಮಿ"[2]. "ಕೀರ್ತನ" ಎಂಬ ಮಾತು ಸಂಸ್ಕೃತ; ಅದರ ಉಲ್ಲೇಖ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿಯೂ ಇನ್ನೂ ಹಿಂದಿನ

---

1. ನೋಡಿ— R. D. Ranade: Pathway to God in Marathi Literature, Bombay, 1961. PP. 147, 152, 153.

2. "One man theatre"—Milton Singer. (ಬೆಂಗಳೂರು ಭಾರತೀಯ ವಿದ್ಯಾಭವನವು ಹರಿಕಥೆ ಬಗ್ಗೆ ನಡೆಸಿದ ವಿಚಾರಗೋಷ್ಠಿಯ ಸ್ಮರಣಸಂಚಿಕೆಯಿಂದ)

ಎಲ್ಲ ಸಾಹಿತ್ಯಗಳಲ್ಲಿಯೂ ದೊರಕುತ್ತದೆ. ಆದರೆ ಅದು ಸಾಮಾನ್ಯಾರ್ಥವನ್ನು ಹೇಳುತ್ತದೆಯೇ ಹೊರತು, "ಹರಿಕಥೆ" ಅಥವಾ "ಕೀರ್ತನ"ದ ವಿಶಿಷ್ಟಾರ್ಥವನ್ನಲ್ಲ. ತಮಿಳು, ತೆಲುಗು ವಿದ್ವಾಂಸರನ್ನನುಸರಿಸಿ[3] ಕನ್ನಡದ ಒಂದಿಬ್ಬರು ಕರ್ನಾಟಕಕ್ಕೂ ಮಹಾರಾಷ್ಟ್ರದಿಂದಲೇ ಆ ಕಲೆ ಬಂದಿದೆಯೆಂದು ವಾದಿಸಿರುವುದು ವಿಲಕ್ಷಣವಾಗಿದೆ. ಆ ಕಲೆಯ ಉಗಮವನ್ನು ಹೊಸದಾಗಿ ಪರಿಶೀಲಿಸುವ ಅಗತ್ಯವಿದೆ.

ಸಂಸ್ಕೃತದ "ಪರಿಕಥಾ" ಎಂಬುದು "ಹರಿಕಥೆ" ಆಗಿದೆಯೆಂದು ಕೆಲವರು ವಾದಿಸುವುದುಂಟು. ಬೌದ್ಧ ಸಾಹಿತ್ಯದ "ದಿವ್ಯಾವದಾನ" ಕೃತಿಯಲ್ಲಿ ದೊರಕುವ ಆ ಪದಕ್ಕೆ ಧಾರ್ಮಿಕ ಕತೆ ಅಥವಾ ನಿರೂಪಣೆ ಎಂಬರ್ಥವಿದೆ. ಇತರೆಡೆ ಅದು ಒಬ್ಬ ದೊಡ್ಡ ವ್ಯಕ್ತಿಯ ಚರಿತ್ರೆ, ಸಾಹಸಗಳು, ಮಾಹಾತ್ಮೆ ಎಂದೂ ದೈವೀ ಪುರುಷನೊಬ್ಬನ ಕತೆಯೆಂದೂ ಅರ್ಥವನ್ನು ಕೊಡುತ್ತದೆ.[4] ಆನಂದವರ್ಧನನ "ಧ್ವನ್ಯಾಲೋಕ"ದ ಪ್ರಕಾರ ಪುರುಷಾರ್ಥಪ್ರಾಂದರ ಪ್ರತಿಪಾದನೆಗಾಗಿ ಹಲವು ಸಂಗತಿಗಳನ್ನು ಒಳಗೊಂಡಿರುವ ಒಂದು ಗದ್ಯ ಕತೆ. ಸಂಸ್ಕೃತದ ಪ್– ಎಂಬುದು ಕನ್ನಡದಲ್ಲಿ ಹ್– ಎಂದಾಗಿ, "ಪರಿಕಥಾ" ಎಂಬುದೇ "ಹರಿಕಥೆ" ಎಂಬ ತದ್ಭವವಾಗಿ ರೂಪುಗೊಂಡಿದೆಯೆಂದು ಕೆಲವರು ವಾದಿಸುವುದೂ ಉಂಟು. ಈ ವಾದದಲ್ಲಿ ಅಷ್ಟು ಹುರುಳಿಲ್ಲ. ಏಕೆಂದರೆ, ಹರಿಕಥೆಯು ಒಂದು ಕಥಾ ನಿರೂಪಣೆಯಾದರೂ ಕನ್ನಡದಲ್ಲಿ ಸಂಸ್ಕೃತದ "ಹರಿಕಥೆ" ಎಂಬ ಪದದ ಬಳಕೆಯಾಗಲಿ ಪ್ರಾಚುರ್ಯವಾಗಲಿ ಇಲ್ಲ.* ಕನ್ನಡ ಮತ್ತು ಇತರ ದಕ್ಷಿಣದ ಭಾಷೆಗಳಲ್ಲಿ ಹರಿಕಥೆಯು ಮುಖ್ಯವಾಗಿ ಹರಿಯ ಅಥವಾ ವಿಷ್ಣುವಿನ ಕತೆಯೇ ಆಗಿದೆ. ಹರಿಕಥೆಗಳು ಬಹುಪಾಲು ವಿಷ್ಣುಕಥೆಗಳೇ

---

3. ನೋಡಿ—ಟಿ. ದೋಣಪ್ಪ: ಹರಿಕಥಾಸರ್ವಸ್ವಂ (ತೆಲುಗು). ಗುಂಟೂರು 1978

4. ಮೋನಿಯರ್ ವಿಲಿಯಮ್ಸ್ ಮತ್ತು ಆಪ್ಟೆಯವರ ಸಂಸ್ಕೃತ-ಇಂಗ್ಲೀಷ್ ಕೋಶಗಳನ್ನು ನೋಡಿ.

* ಕ್ರಿ. ಶ. 1122–38ರಲ್ಲಿ ಚಾಳುಕ್ಯ ಚಕ್ರವರ್ತಿ ಮೂರನೆಯ ಸೋಮೇಶ್ವರನ "ರಾಜಮಾನಸೋಲ್ಲಾಸ" ಅಥವಾ "ಅಭಿಲಷಿತಾರ್ಥಚಿಂತಾಮಣಿ"ಯಲ್ಲಿ 'ಕಥಾವಿನೋದ'ದ ಬಗ್ಗೆ ಹಲವು ವಿವರಗಳಿವೆ. ಕಥಕ ಅಥವಾ 'ಕಥಾವಿದ'ನು ಅರವತ್ತನಾಲ್ಕು ಕಲೆಗಳಲ್ಲಿ ಪರಿಣತನೂ, ಚತುರ್ಭಾಷಾವಿದನೂ, ಚಿತ್ತಜ್ಞನೂ, ನಾನಾರಸಕಥಾವಿದನೂ, ಸಮಯಜ್ಞನೂ, ಸಾವಧಾನನೂ, ರಾಗದ್ವೇಷ ವಿವರ್ಜಿತನೂ, ಆಸ್ತಿಕನೂ, ವಾಗ್ಮಿಯೂ, ಯುವಕನಾದರೂ ವಯೋವೃದ್ಧರ ಪರಿಣತ ಬುದ್ಧಿಯುಳ್ಳವನೂ ಆಗಿರಬೇಕು. ಅವನು ನಿರೂಪಣೆಗಾಗಿ ರಾಮಾಯಣ, ಮಹಾಭಾರತ, ಪುರಾಣಗಳು, ವೀರರ ಕಥಾನಕಗಳನ್ನು ಆರಿಸಿಕೊಳ್ಳಬೇಕು. ರೌದ್ರ, ಬೀಭತ್ಸ, ಹಾಸ್ಯ, ಕರುಣ, ಭಯಾನಕ, ಶೃಂಗಾರ ಇತ್ಯಾದಿ ರಸಗಳನ್ನು ಉಕ್ಕಿಸಬೇಕು. ಕಥೆಯನ್ನು ಕೇಳಿದ ರಾಜನಾಗಲಿ, ಇತರರಾಗಲಿ ಆವೇಶಪೂರಿತರಾಗುವಂತಿರಬೇಕು. ಇಲ್ಲಿಯ ವರ್ಣನೆ ಕಥೆಗಳನ್ನು ನಿರೂಪಿಸಬಲ್ಲ 'ಕಥಕ'ನನ್ನು ಸೂಚಿಸುವುದೇ ಹೊರತು ಹರಿಕಥಾಕಾರನನ್ನಲ್ಲವೆಂಬುದು ಸ್ಪಷ್ಟ. ಮಾನಸೋಲ್ಲಾಸದಲ್ಲಿ ಹರಿಕಥೆಗೆ ಸೂಚನೆಗಳೇ ಇಲ್ಲ. (ಮೇಲಿನ ವಿವರಗಳು ಬಿ.ವಿ.ಕೆ. ಶಾಸ್ತ್ರಿಯವರ ಅಪ್ರಕಟಿತ ಲೇಖನವೊಂದರಿಂದ.)

ಆಗಿವೆ. ಆ ಪದದ ಅರ್ಥ ವಿಶಾಲ ಹೊಂದಿ, ಶಿವನ ಅಥವಾ ಜಿನನ ಅಥವಾ ಮನುಷ್ಯನ ಕತೆಯಾಗಿದ್ದರೂ "ಹರಿಕಥೆ" ಎಂಬ ಪದ ಮಾತ್ರ ಉಳಿದುಕೊಂಡಿದೆ. ವಿಶಿಷ್ಟಾರ್ಥ ಹೋಗಿ, ಸಾಮಾನ್ಯಾರ್ಥ ಬಂದಿದೆ. ಆದರೆ, ವಸ್ತು ಏನೇ ಇರಲಿ, ಈ ಕಲೆಗೆ ಹರಿಕಥೆ ಎಂಬ ಹೆಸರಿರುವುದರಿಂದ, ಈ ಕಲೆ ಮೂಲತಃ ವೈಷ್ಣವ ಭಕ್ತಿ ಸಂಪ್ರದಾಯದಿಂದ ಮೂಡಿಬಂದಿದೆಯೆಂಬಲ್ಲಿ ಅನುಮಾನ ತೋರದು.

ಕರ್ನಾಟಕದ ಹಿಂದಿನ ಶಾಸನಗಳಲ್ಲಿ ಕಾವ್ಯಗಳಲ್ಲಿ ಪುರಾಣವಾಚನ,[5] ಕಥಾ ಪ್ರಸಂಗಗಳ ಉಲ್ಲೇಖಗಳು ಬರುತ್ತವೆ. ಪುರಾಣವಾಚನಗಳು ನಡೆಯುತ್ತಿದ್ದುದು ದೇವಾಲಯಗಳಲ್ಲಿ.[6] ಹನ್ನೆರಡನೆಯ ಶತಮಾನದ ಶೈವಗುರುಗಳೊಬ್ಬರನ್ನು "ಶಿವಧರ್ಮ ಕಥಾಕಥನ ಪ್ರಸಂಗ" ಮಾಡುವುದರಿಂದ "ಸಾರಸ್ವತ ಮಹೋದಯ" ಎಂಬ ಬಿರುದು ಪಡೆದವರೆಂದು ವರ್ಣಿಸಲಾಗಿದೆ.[7] ಅವರು ಶ್ಲೋಕವೊಂದನ್ನು ಉದಾಹರಿಸಿ ಅದ್ಭುತವಾಗಿ ವ್ಯಾಖ್ಯಾನಿಸಬಲ್ಲವರಾಗಿದ್ದರು. ಅವರನ್ನು ಇನ್ನೊಂದು ಶಾಸನ* "ನಿರುಪಮೋಪನ್ಯಾಸ ದೇವನದೀಪ್ರವಾಹಂ" ಎಂದು ಹೊಗಳುತ್ತದೆ. ಇವು ವ್ಯಕ್ತಿಯ ವಾಗ್ಮಿತೆಯನ್ನು (oratory) ಸೂಚಿಸುತ್ತವೆಯೇ ಹೊರತು, "ಕಥಾಕಥನ ಪ್ರಸಂಗ" ದಂತಹ ಮಾತುಗಳು ಹರಿಕಥೆಯನ್ನು ಸೂಚಿಸುತ್ತವೆಯೆಂದು ಭಾವಿಸುವುದು ತಪ್ಪಾಗುತ್ತದೆ. (ಕೇರಳದಲ್ಲಿ ಹರಿಕಥೆಯನ್ನು "ಕಥಾಪ್ರಸಂಗ" ವೆಂದು ಕರೆಯುತ್ತಾರೆ.) ಹರಿಕಥೆಯ ಮೊದಲ ಸೂಚನೆ ಹದಿನೈದನೇ ಶತಮಾನದ ಹರಿದಾಸರಾದ ಶ್ರೀಪಾದರಾಯರಲ್ಲಿ ದೊರಕುತ್ತದೆ.

> ವ್ಯರ್ಥವಲ್ಲವೇ ಜನ್ಮ ವ್ಯರ್ಥವಲ್ಲವೇ ॥ ಪ ॥
> ...... ...... ...... ......
> ತಾಳ ತಂಬೂರಿಗಳಿಂದೆ ಕಾಲಗೆಜ್ಜೆ ಧ್ವನಿಗಳಿಂದ [ಪಾಠಾಂತರ, ಕಾಲಲಂದಿಗೆ ಗತಿಗಳಿಂದ]
> ಕೇಳುಗೊಂಡಂತೆ ಹರಿಯ ಚಾಳಿ ಪೊಗಳದವನ ಜನ್ಮ ।[8]

ಇಲ್ಲಿ ಒಬ್ಬ ಹರಿದಾಸನ ವರ್ಣನೆಯಿದೆ ಎಂದೂ ಹರಿಕಥಾಕಾರನ ವರ್ಣನೆಯಿಲ್ಲ ಎಂದೂ ವಾದಿಸಲು ಅವಕಾಶವಿದೆ. ಇದನ್ನು ಒಂದು ವೇಳೆ ಕೈಬಿಟ್ಟರೂ, ಹದಿನಾರನೇ ಶತಮಾನದ ಪೂರ್ವಾರ್ಧದಲ್ಲಿದ್ದ ಪುರಂದರದಾಸ ಮತ್ತು ಕನಕದಾಸ ರಲ್ಲಿ ಹರಿಕಥೆ ಕಲೆಯ ಸ್ಪಷ್ಟ ಉಲ್ಲೇಖಗಳಿವೆ. ಕೆಳಗಿನ ಉದಾಹರಣೆಗಳನ್ನು ನೋಡಿ:—

---

5. South Indian Inscriptions, XV, P. 306.
6. ಅದೇ.
7. Ep. Carn, VII. SK. 99. 1113 A.D.
* ಅದೇ. SK. 98. 1103 AD.
8. ಶ್ರೀಪಾದರಾಯರ ಕೃತಿಗಳು (ಸಂ: ಜಿ. ವರದರಾಜಾರಾವ್, ಮೈಸೂರು 1973 ಪುಟ 159)

(1) ಹರಿಕಥಾಶ್ರವಣ ಮಾಡೊ ಪಾಡೊ
ಹರಿಕಥಾ ಶ್ರವಣ ಮಾಡೋ
ಪಥ ವೈಕುಂಠಕಿದು ನೋಡೋ ||[9]

(2) ಹರಿಕಥಾಮೃತ ಸೇವೆ ಹರಿದಾಸರಲ್ಲದಲೆ
ದುರುಳ ಮೂಢರು ಬಲ್ಲರೆ |
ಸ್ತನ್ಯಪಾನದ ಮಹಿಮೆ ಚಿಣ್ಣರರಿಯುವಂತೆ
ಮಣ್ಣು ಬೊಂಬೆಯು ಬಲ್ಲುದೆ ||[10]

(3) ಹರಿಕಥೆ ಕೇಳುವ ಪರಿಜನರು ಈ
ಹರಿಯ ಪುರಾಣಕ್ಕೆ ಸರಿದು ಕುಳ್ಳಿರುವರು ||

ನೆಲ್ಲು ಒಣಗಲಿಲ್ಲ ಹಲ್ಲುನೋವು ಘನ್ನ
ಕಲ್ಲು ಹೋಗದು ಎನ್ನ ಕೈಯಲೆಂದು
ಫುಲ್ಲನಾಭನ ಕಥೆ ಪೂರೈಸಿ ಕೇಳದೆ
ಕಲ್ಲಗೋವಿನ ಹಾಲ ಕರುವು ಬಯಸುವಂತೆ ||

ಪರರನಿಂದೆಗಳ ಬಿಡದೆ ಕಾಪಾಡುವ
ಮರೆತೆನೆ ಮನೆಯ ಬಾಗಿಲ ಹಾಕಲು
ಕರುವು ಕಟ್ಟಲಿಕೆ ಮರೆತು ಬಂದೆನೆಂಬ ಈ
ಹರಿಯ ಪುರಾಣಕ್ಕೆ ನೆರೆದು ಕುಳ್ಳಿರುವರು ||[11]

(4) ಎಲ್ಲಿ ಹರಿಕಥಾ ಪ್ರಸಂಗವೋ ಅಲ್ಲಿ
ಗಂಗಾ ಯಮುನಾ ಸಿಂಧು ಸರಸ್ವತಿಯರು ಬಂದು
ಅಣಿಯಾಗಿ ನಿಲ್ಲುವರು ||[12]

(5) ಮುಟ್ಟಬೇಡ ಮುಟ್ಟಬೇಡ ಮುರಹರ ದಾಸರನು
ಕಟ್ಟು ಮಾಡಿದ ಯಮನು ತನ್ನ ದೂತರಿಗಂದು
............
ವಾಸುದೇವನ ವಾಸರವನಾಚರಿಸುವವರ
ಬೇಸರದೆ ಹರಿಕಥಾಪ್ರಸಂಗದವರ
ಶೇಷಶಯನ ಕಾಗಿನೆಲೆಯಾದಿಕೇಶವನ
ದಾಸಾನುದಾಸರಿಗೆ ದಾಸರಾದವರ ||[13]

---

9. ಪುರಂದರ ದಾಸರ ಕೀರ್ತನೆಗಳು, ಸಂ : ಸುಬೋಧ ರಾಮರಾವ್, ಬೆಂಗಳೂರು, 1947. ಪು. 5.
10. ಅದೇ. ಪು. 44
11. ಅದೇ. ಪು. 94
12. ಅದೇ.
13. ಕನಕದಾಸರ ಕೀರ್ತನೆಗಳು. (ಕೀರ್ತನೆ 85)

(6) ಹ್ಯಾಂಗೆ ನೀ ದಾಸನಾದಿ ಪ್ರಾಣಿ

...... ...... ......

ಕಾಲುಗೆಜ್ಜೆಯ ಕಟ್ಟಿ ಮೇಲೆ ಕರತಾಳ ಪಿಡಿದು

ಶ್ರೀಲೋಲನ ಗುಣ ಪೊಗಳಿ ನಟಿಸದಲೆ ||[14]

(7) ತಾಳ ದಂಡಿಗೆ ಶ್ರುತಿ ಮೇಳ ತಂಬೂರಿಗೊಂಡು

ಸೂಳೆಯಂತೆ ಕುಣಿಯುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ||[15]

ಮೇಲಿನ ಉಲ್ಲೇಖಗಳಲ್ಲಿ (4) ಮತ್ತು (5) ರಲ್ಲಿ ಬರುವ "ಹರಿಕಥಾಪ್ರಸಂಗ" ಮಾತನ್ನು ಗಮನಿಸಿ. (7) ರಲ್ಲಿ ಭಕ್ತನೊಬ್ಬ ತಾಳ, ದಂಡಿಗೆಗಳ ಜೊತೆಗೆ ಶ್ರುತಿ ಮೇಳ ತಂಬೂರಿಗಳನ್ನು ಹಿನ್ನೆಲೆಯಾಗಿ ತನ್ನ ಕುಣಿತಕ್ಕೆ ಏರ್ಪಾಟು ಮಾಡಿಕೊಂಡಿರುವುದನ್ನು ಗಮನಿಸಬೇಕು. ಕಾಲಿಗೆ ಗೆಜ್ಜೆ ಕಟ್ಟಿ ಕುಣಿಯುವುದು ಬರಿಯ ಭಕ್ತನ ವೈಯಕ್ತಿಕ ಭಕ್ತಿಭಾವಾವೇಶಜನ್ಯವಾದ ನರ್ತನವನ್ನು ಹೇಳದೆ ಆ ನರ್ತನವು ಪ್ರದರ್ಶನಾಭಿಲಾಷೆಯ ಕಲೆಯೂ ಆಗಿರುವುದನ್ನು ಸೂಚಿಸುತ್ತದೆ. ಶ್ರೀಪಾದರಾಯರಲ್ಲೂ ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಕುಣಿಯುವ ವರ್ಣನೆಯು ಬಂದಿರುವುದನ್ನು ಗಮನಿಸಿ. ಆದ್ದರಿಂದ, ಶ್ರೀಪಾದರಾಯರ ರಚನೆಯೂ ಸೇರಿದಂತೆ ಮೇಲಿನ ಎಲ್ಲ ರಚನೆಗಳೂ ಸುಮಾರು 1450–1500ರ ಹೊತ್ತಿಗೆ ಕರ್ನಾಟಕದಲ್ಲಿ ಹರಿಕಥೆಯು ಒಂದು ಕಲೆಯಾಗಿ ರೂಪುಗೊಂಡಿತ್ತೆಂಬುದನ್ನು ಹೇಳುತ್ತವೆ. ಕ್ರಿ. ಶ. 1700ರಲ್ಲಿದ್ದ ಶ್ರೀ ವಿಜಯದಾಸರ ಕೀರ್ತನೆಯಲ್ಲಿ ಹರಿಕಥೆಯ ಉಲ್ಲೇಖ ದೊರಕುತ್ತದೆ:

ಪಾಪೋಗು ಪೋದುವಲ್ಲ || ಪ ||

...... ...... ......

ಪರಮ ಭಾಗವತರು ಹರಿಕಥೆ ಹೇಳಲು

ಪರಮ ಹರ್ಷದಿಂದ ಕೇಳುತಿದ್ದೆ

ಪರಮ ಪಾಪಿಷ್ಠರ ಪಾಲಾಗಿ ಹೋದಾವು

ಪರಮಾತ್ಮನ ಚಿತ್ತಕ್ಕೆ ಬಂದಿತೀಗೆನ್ನ ||[16]

ಹರಿಕಥೆ ಹೆಸರಿನ ಸಾರ್ವಜನಿಕ ಸಭೆಗೆ ಬಂದು ಜನ ಕುಳಿತು ಆಲಿಸುತ್ತಿರುವಾಗ ಅವರು ಹೊರಗೆ ಬಿಟ್ಟು ಬಂದಿದ್ದ ಪಾದರಕ್ಷೆಗಳ ಕಳವಾಗುತ್ತಿದ್ದುದನ್ನು ಇಲ್ಲಿ ಹೇಳುತ್ತಿದ್ದಾರೆ.

ಶ್ರೀ ವಿಜಯದಾಸರಿಗಿಂತ ಐವತ್ತು ವರ್ಷಗಳ ಹಿಂದೆ ಇದ್ದ ಶಾಂತವೀರದೇಶಿಕನು (ಕ್ರಿ. ಶ. 1650) ತನ್ನ 'ಶಿವಲಿಂಗಚಾರಿತ್ರ'ದಲ್ಲಿ ತನ್ನ ತಂದೆ ಚನ್ನವೀರಾರ್ಯನು

---

14. ಅದೇ. (ಕೀರ್ತನೆ 107)
15. ಅದೇ. (ಕೀರ್ತನೆ 167)
16. ಕೆ. ಗೋಕುಲನಾಥ್: ಶ್ರೀ ವಿಜಯದಾಸರು, ಬೆಂಗಳೂರು, 1978, ಪು. 369.

ಭಕ್ತರ ಮನೆಗಳಲ್ಲಿ ರಾಜಾಸ್ಥಾನಗಳಲ್ಲಿ ಕೀರ್ತನಗಳನ್ನು ಮಾಡುತ್ತಿದ್ದುದನ್ನು ವರ್ಣಿಸಿದ್ದಾನೆ.[17]

ಭಸಿತೋದ್ಧೂಳನಂಗೈದು ಧಾರಣವ ಮಾಡುತ್ತೊಲ್ದು ರುದ್ರಾಕ್ಷಿಯಂ
ಮುಸುಕಲ್ ತತ್ಪುರತತ್ವಮಂಡನಮಹಾ ಸದ್ವಸ್ತ್ರ ಸತ್ಕಾಂತಿಯಿಂ
ಕುಶಲಂ ಕೈವಿಂಗಲಾಂತು ದಂಡಿಗೆಯುನಾ ಶ್ರೀ ಚನ್ನವೀರಾರ್ಯಕಂ
ಒಸೆದುಂ ಕಾಯುಕಕ್ಕೈದಿ ಬಂದನು ಮಹಾಸದ್ಭಕ್ತರಾನಂದಿಸಲ್ ॥

ಇಂತು ಚನ್ನವೀರಾರ್ಯಂ ಈಶ್ವರಾರ್ಚಕರ ಮಂದಿರಕ್ಕೈದಿ ಮಂಡಿಸಿ ಮನೋನುರಾಗದಿಂ ಮಿಗೆ ದಂಡಿಗೆಯಾಂತು ಮೀಟು ಮೀಟಾಗಿ ಪಾಡುತಿರ್ದನದೆಂತೆನೆ

ದೇವ ಹರೀಶ ದೇವಗುರು ಶಂಕರದೇವ ಗುಹೇಶ್ವರಾರ್ಯರಾ
ದೇವ ಪದಾರ್ಚನಾ ನಿಜಗುಣಾರ್ಯ ವೀರಣ ನಾಗಿದೇವ ಮ
ದ್ದೇವ ಪುರಾತನೋಕ್ತಿ ವಚನಂಗಳ ನೋಡುತ ವೀರಾರ್ಯಕಂ
ದೇವ ಮಹೇಶ ಭಕ್ತಜನರಂ ಮಿಗೆ ಕೇಳಿಪನುತ್ಸವಂಗಳೊಳ್ .[18]

ಅದೇ ರೀತಿ, ಭಕ್ತರ ಮನೆಗಳಲ್ಲದೆ ರಾಜಾಸ್ಥಾನಗಳಲ್ಲೂ "ಕೀರ್ತನಮಾಡು"ತ್ತಿದ್ದ ವಿಷಯವು ಇನ್ನೊಂದೆಡೆ ಬಂದಿದೆ:

"ಇಂತು ಚನವೀರದೇವಂ ವೀರೇಂದ್ರನಾಸ್ಥಾನಕ್ಕೆ ತಂದು[19] ನಮಸ್ಕಾರವಂ ಕೈಕೊಂಡು ನೃಪನ ಪೊರೆಯೊಳ್ ಮಂಡಿಸಿ ಮನೋನುರಾಗದಿಂದ ಪಾಡುತಿರ್ದನದೆಂತೆನೆ.

ದಂಡಿಗೆಯಂ ನುಡಿಸುತ್ತೊಲವಿಂದ
ಮಂಡಲಪಾಲನಿಗಚ್ಚರಿಯಾಗಲ್
ಹಿಂದು ಪುರಾತರ ಕೀರ್ತನ ಮಾಡಲ್
ಕಂಡರೆ ಸಂತಸದಾಳಿದ ಭೂಪ ॥[20]

ಚನ್ನವೀರಾರ್ಯ ಕುಳಿತು ದಂಡಿಗೆ ನುಡಿಸುತ್ತ ವಚನಗಳನ್ನು ಓದುತ್ತ, ಹಿಂದಿನ ಹಲವಾರು ಪುರಾತನರ "ಕೀರ್ತನಮಾಡು"ತ್ತಿದ್ದ.[21] "ಕೀರ್ತನ ಮಾಡು" ಎಂಬುದು

---

17. ಈ ಕೃತಿಯ ಕಡೆ ನನ್ನ ಗಮನವನ್ನು ಸೆಳೆದವರು ಶ್ರೀ ಎಸ್. ಶಿವಣ್ಣ.
18. ಶಿವಲಿಂಗ ಚಾರಿತ್ರ (ಸಂ: ಎಂ. ಜಿ. ನಂಜುಂಡಾರಾಧ್ಯ, ಬೆಂಗಳೂರು, 1966 2. 47-48.)
19. ಇವನು ನಂಜನಗೂಡು ತಾಲೂಕಿನ ಹುಲ್ಲಹಳ್ಳಿಯ ದೊರೆ.
20. ಶಿವಲಿಂಗಾಚಾರಿತ್ರ, 3-2 ವಚನ.
21. ಶಾಂತಿವೀರದೇಶಿಕನ ಮುತ್ತಾತ ಶಿವಲಿಂಗಾರ್ಯನು 'ಪುರಾಣದಾರ್ಯ'ನೆಂದೇ ಪ್ರಸಿದ್ಧನಾಗಿದ್ದನಂತೆ. ಅವನು ಭಕ್ತರ ಊರುಗಳಿಗೆ ಹೋಗುವಾಗ ಅವನ ಶಿಷ್ಯರು ಹಲವಾರು ಪುರಾಣಗಳನ್ನು ಹೊತ್ತು ತರುತ್ತಿದ್ದರು. ಅವನು ಪುರಾಣ ಓದುತ್ತಿದ್ದರೆ ಇಬ್ಬರು ಜೋಡಿ ತಂಬೂರಿಯನ್ನು ನುಡಿಸುತ್ತಿದ್ದರು; ತಾಳಮೇಳ ಇರುತ್ತಿತ್ತು.

ನುಡಿಸುತ ನಲ್ಮೆಯಿಂದ ಯುಗದಂಡಿಗೆಯಾಂತು ವಿನೋದ ಕೈಯ್ಮಿಗಲ್
ಸಡಗರ ತಾಳಮೇಳ ಸಲೆ ಪೊಣ್ಮುತಿರಲ್ಕೆ ಸಮಸ್ತಕಾವ್ಯಮಂ
ಪಿಡಿಯಿಸುತೋರ್ವನಿಂದಲೊಲಿದೋದಿ ಮಹಾರ್ಥವ ಪೇಳೆ ಕೇಳಿದರ್
ಪಡಿ ನಿಮಗಿಲ್ಲವೆಂದು ಪೊಗಳುತ್ತಿರಲೆಲ್ಲ ಪುರಾಣದಾರ್ಯನಂ ॥

ಹರಿಕಥೆ ಮಾಡು ಎಂಬುದಕ್ಕೆ ಸಮಾನವಾದ ಪಾರಿಭಾಷಿಕ ಪದ; ಅದಕ್ಕೆ ಬರೀ ಕೀರ್ತಿಸು, ಹೊಗಳು ಎಂಬ ಸಾಮಾನ್ಯಾರ್ಥವಿಲ್ಲ. ಎಂದರೆ, ಸುಮಾರು 1450–1500ರಲ್ಲಿ ಹರಿ ಅಥವಾ ವಿಷ್ಣುವಿನ ಕತೆಯನ್ನು ಮಾತ್ರ ಒಳಗೊಂಡಿದ್ದ ಹರಿಕಥೆ ಕಲೆಯು ಕ್ರಿ. ಶ. 1650ರ ಹೊತ್ತಿಗೆ ಶಿವನ, ಶಿವಭಕ್ತರ ಕತೆಗಳನ್ನೂ ವಸ್ತುವಾಗಿ ಒಳಗೊಳ್ಳುವಷ್ಟು ಬೆಳೆದಿತ್ತು ಎಂಬುದು ತಿಳಿದುಬರುತ್ತದೆ. ಹರಿಭಕ್ತರಿಂದ ಶಿವ ಭಕ್ತರು ಆ ಪ್ರಕಾರವನ್ನು ಕಲಿತು ರೂಢಿಸಿಕೊಂಡಿದ್ದರು.

ವೈಷ್ಣವ ಸಂದರ್ಭದಲ್ಲಿ ಹರಿಕಥೆ ಹುಟ್ಟಿಕೊಂಡಿತೆಂಬುದು ಖಚಿತ. ಮತ್ತು ಅದು ಕರ್ನಾಟಕದ ಹರಿದಾಸರಲ್ಲಿ ಮೊತ್ತ ಮೊದಲು ಮೂಡಿತು ಎಂಬುದೂ ಬಹುಶಃ ಖಚಿತ. ಏಕೆಂದರೆ "ಹರಿಕಥೆ"ಯ ಅತ್ಯಂತ ಪ್ರಾಚೀನ ಉಲ್ಲೇಖಗಳು ಹರಿದಾಸ ರಲ್ಲಿಯೇ ದೊರಕುವುದು. ಹರಿದಾಸರು ಸ್ವತಃ ಭಕ್ತಿಗಾಗಿ ತಮ್ಮಷ್ಟಕ್ಕೆ ತಾವು ಹಾಡಿಕೊಳ್ಳುತ್ತಿದ್ದುದಲ್ಲದೆ, ಕಾಲಿಗೆ ಗೆಜ್ಜೆ ಕಟ್ಟಿ ತಾಳ ತಂಬೂರಿ ಹಿಡಿದು ಊರೂರು ತಿರುಗುತ್ತ ಹರಿಭಕ್ತಿಯ ಪ್ರಚಾರ ಕಾರ್ಯವನ್ನೂ ಮಾಡುತ್ತಿದ್ದರು. ಭಕ್ತಿ ಪ್ರಚಾರ ಗೊಳ್ಳಬೇಕು ಎಂಬ ಸಂಕಲ್ಪವು ಯಾವಾಗ ಭಕ್ತನಲ್ಲಿ ಮೂಡುತ್ತದೆಯೋ ಅಲ್ಲಿ ಕಲೆ ಕಾಣಿಸಿಕೊಳ್ಳುತ್ತದೆ. ಕಲೆ ಒಂದು ಅಭಿವ್ಯಕ್ತಿ : ಆ ಅಭಿವ್ಯಕ್ತಿಯ ಒಂದು ತುದಿಯಲ್ಲಿ ಸೃಜನಶೀಲವ್ಯಕ್ತಿಯಿದ್ದರೆ ಇನ್ನೊಂದು ತುದಿಯಲ್ಲಿ ಪ್ರೇಕ್ಷಕ ಅಥವಾ ಶ್ರೋತೃ ಇರು ತ್ತಾನೆ. ವಿಷ್ಣುವಿನ ಕತೆಗಳನ್ನೂ ವಿಷ್ಣು ಪರವಾದ ಭಕ್ತಿಯನ್ನೂ ಪ್ರಚುರಪಡಿಸುವ ಹರಿದಾಸರ ಉದ್ದೇಶವಲ್ಲಿ ಹರಿಕಥೆ ರೂಪು ತಳೆದಿರುವಂತೆ ತೋರುತ್ತದೆ. ಇಂದಿಗೂ ಬೆಳಗ್ಗೆ ಕೀರ್ತನೆಗಳನ್ನು ಹಾಡುತ್ತ ಬರುವ ಹರಿದಾಸರ ವೇಷಭೂಷಣಗಳಿಗೂ ಹರಿಕಥಾದಾಸರ ವೇಷಭೂಷಣಗಳಿಗೂ ದಟ್ಟ ಹೋಲಿಕೆಯಿರುವುದು ಹರಿಕಥೆಯು ಹರಿದಾಸರಿಂದ ಆರಂಭವಾಯಿತೆಂಬ ವಾದಕ್ಕೆ ಸಮರ್ಥ ಸಾಕ್ಷ್ಯಾಧಾರಗಳಲ್ಲೊಂದು.

ಹರಿದಾಸರಿಗೆ ಹರಿಕಥೆಕಲೆಯನ್ನು ರೂಪಿಸಿಕೊಳ್ಳಲು ಮಾದರಿ ಅಥವಾ ಮೂಲಪ್ರಚೋದನೆ ಬಹುಶಃ ಜಾನಪದಶಾಸ್ತ್ರದಿಂದ (Folklore) ಬಂದಿರಬೇಕು. ಹರಿಕಥೆಯು ಒಂದರ್ಥದಲ್ಲಿ ಶಿಷ್ಟಕಲೆಯೂ ಹೌದು, ಒಂದರ್ಥದಲ್ಲಿ ಜಾನಪದಕಲೆಯೂ ಹೌದು. ಅದು ಏಕಕಾಲಕ್ಕೆ ಮಾರ್ಗವೂ ಹೌದು, ದೇಶಿಯೂ ಹೌದು. ಹರಿಕಥೆಯು ಶಿಷ್ಟ ಅಥವಾ ಮಾರ್ಗ. ಏಕೆಂದರೆ ಅದನ್ನು ಮಾಡುವವರು ಮುಖ್ಯವಾಗಿ ಬ್ರಾಹ್ಮಣರು[22] ಮತ್ತು ಕಲಿತವರು. ಅದರಲ್ಲಿ ಬರುವ ಕಥೆ ಸುಪ್ರಸಿದ್ಧವಾದುದು ಮತ್ತು ಪುರಾಣಪ್ರಸಿದ್ಧವಾದುದು. ಅದರಲ್ಲಿ ಶಿಷ್ಟಸಾಹಿತ್ಯದ ಕೀರ್ತನೆಗಳು ಬರುತ್ತವೆ ಮತ್ತು ನಿರೂಪಣೆಯ ಭಾಷೆ ಬ್ರಾಹ್ಮಣರ ಶಿಷ್ಟಭಾಷೆ; ಶೈಲಿಯಲ್ಲಿ ಅದು ಗ್ರಾಂಥಿಕ ರೂಪಕ್ಕೆ ಹತ್ತಿರ. ಹರಿಕಥೆಯು ಜಾನಪದ ಅಥವಾ ದೇಶ್ಯ; ಏಕೆಂದರೆ

---

22. ವೀರಶೈವರು, ಒಕ್ಕಲಿಗರು, ಜೈನರು ಇವರು ಆನಂತರ ಆ ಕಲೆಯನ್ನು ಈಚೆಗೆ ರೂಢಿಸಿಕೊಂಡಿದ್ದಾರೆ.

ಹರಿಕಥೆಯ ವಸ್ತು ಸುಪ್ರಸಿದ್ಧವಾದರೂ ಅದರ ಒಟ್ಟು ಭಾಷಿಕಭಾಗ ಪೂರ್ವ ನಿರ್ಣೀತವಾದುದಲ್ಲ. ಯಾರೂ, ಈಚಿನ ನಾಟಕಗಳಂತೆ, ಪಾಠವನ್ನು ಬರೆದಿಡುವು ದಿಲ್ಲ. ಹರಿಕಥಾಕಾರ ಆ ದಿನದ ಆ ಕ್ಷಣದ ಪ್ರಚೋದನೆಗನುಗುಣವಾಗಿ ಭಾಷೆ ಯನ್ನು ಬಳಸುತ್ತಾನೆ; ಬೇಕಾದ ಮಾರ್ಪಾಟುಗಳನ್ನು ಮಾಡಿಕೊಳ್ಳುತ್ತಾನೆ. ಮತ್ತು ಜಾನಪದಶಾಸ್ತ್ರದಲ್ಲಿನಂತೆ ಮಧ್ಯೆ ಮಧ್ಯೆ ಹಲವಾರು ಉಪಕಥೆಗಳನ್ನು ಘಟನೆ ಪ್ರಸಂಗಗಳನ್ನು ಆಧುನಿಕ ವಿಷಯಗಳನ್ನು ತರಬಹುದು. ಒಂದು ಕಥೆಯನ್ನು ಒಬ್ಬನೇ ವ್ಯಕ್ತಿ ಅಭಿನಯಿಸುತ್ತಾನೆ. ಜಾನಪದ ಮಾಧ್ಯಮಗಳಾದ "ಚೌಡಿಕೆ", "ಗೊಂದಣ", "ವೀರಗಾಸೆ" ಅಥವಾ "ಖಡ್ಗ"ಗಳನ್ನು ಈ ಸಂದರ್ಭದಲ್ಲಿ ಜ್ಞಾಪಿಸಿ ಕೊಳ್ಳಬೇಕು. ಇವುಗಳಲ್ಲಿ ಕ್ರಮವಾಗಿ ಎಲ್ಲಮ್ಮ, ಭವಾನಿ ಮತ್ತು ವೀರಭದ್ರರ ಕತೆಗಳನ್ನು ಪದ್ಯ, ಗದ್ಯಗಳಲ್ಲಿ ಜಾನಪದ ಕಲಾವಿದರು ಅಭಿನಯಿಸುತ್ತಾರೆ. ಇಲ್ಲೆಲ್ಲ ಮುಖ್ಯವಾಗಿರುವುದು ಒಬ್ಬ ವ್ಯಕ್ತಿಯೇ. ಅವನ ಹಾಡು, ನಿರೂಪಣೆಗೆ ಹಿನ್ನೆಲೆಯಾಗಿ ಒಂದೆರಡು ವಾದ್ಯಗಳಿರಬಹುದು. ಅವನು ಹಾಡುತ್ತ, ಕುಣಿಯುತ್ತ, ದೇವಿ ಅಥವಾ ದೈವೀಪುರುಷನ ಕತೆಯನ್ನು ಸಾದ್ಯಂತವಾಗಿ ಅಭಿನಯಿಸುತ್ತಾನೆ. ಹಾಡುಗಳು ಪೂರ್ವನಿರ್ಣೀತವಾದರೂ ಗದ್ಯ ನಿರೂಪಣೆ ಅವನದೇ. ಅವನೇ ಎಲ್ಲ ಪಾತ್ರಗಳಾಗಿ ಸಂಭಾಷಿಸುತ್ತಾನೆ. ಮೇಲೆ ಹೇಳಿದ ಜಾನಪದ ಪ್ರಕಾರಗಳಲ್ಲದೆ, ಹಿಂದಿನ ಕರ್ನಾಟಕದ "ಕೇಳಿಕೆ", "ಕಲಕೇತ", "ಬಹುರೂಪಿ" ಎಂಬ ಪ್ರಕಾರಗಳನ್ನೂ ನೋಡಬಹುದು. ಇವೆಲ್ಲ ಏಕವ್ಯಕ್ತಿಪ್ರಧಾನವಾದ ನಾಟಕೀಯ ಲಕ್ಷಣಗಳನ್ನುಳ್ಳ ಜಾನಪದ ಕಲೆಗಳು; ಒಬ್ಬ ವ್ಯಕ್ತಿ ಒಂದು ಕತೆಯನ್ನೋ ಘಟನೆಯನ್ನೋ ಹಾಡು, ಮಾತು, ಕುಣಿತ, ಸಂಭಾಷಣೆಗಳ ಮೂಲಕ ನಾಟ್ಯೀಕರಿಸುತ್ತಾನೆ. "ಪಗರಣ"ದಲ್ಲಿ —ಹಿಂದಿನ ಕರ್ನಾಟಕದ ಜಾನಪದ ಕಲೆ. ಈಗಲೂ ಕರ್ನಾಟಕದ ಕೆಲವೆಡೆ ಜೀವಂತ ವಾಗಿದೆ—ಒಬ್ಬ ವ್ಯಕ್ತಿ ಅಥವಾ ಇಬ್ಬರೂ ವೇಷ ಧರಿಸಿ ಪೌರಾಣಿಕ ಅಥವಾ ಸಾಮಾಜಿಕ ಮತ್ತು ಸಮಕಾಲೀನ ಕತೆ ಅಥವಾ ದೃಶ್ಯಗಳನ್ನು ಅಭಿನಯಿಸುತ್ತಾರೆ. ಈ ಎಲ್ಲ ಜಾನಪದ ಕಲೆಗಳ ಉದ್ದೇಶ ಸಾಮಾನ್ಯರಿಗೆ ಮನರಂಜನೆ ನೀಡುವುದಾದರೂ ಇವುಗಳಿಗೆ ಪ್ರಬಲವಾದ ಧಾರ್ಮಿಕ ಹಿನ್ನೆಲೆಯಿರುತ್ತದೆ. ವೈಷ್ಣವ ಹರಿದಾಸರು ಈ ನಾಟಕೀಯ ಗುಣದ ಜಾನಪದ ಕಲಾ ಮಾಧ್ಯಮಗಳಿಂದ ಪ್ರಚೋದನೆಯನ್ನು ಪಡೆದು ಅವುಗಳ ಮಾದರಿಯನ್ನು ತಮ್ಮ ಭಕ್ತಿ ಮತ್ತು ನೀತಿ ಪ್ರಚಾರದ ಉದ್ದೇಶ ಕ್ಕಾಗಿ ಸೂಕ್ತ ಬದಲಾವಣೆಗಳೊಡನೆ ಬಳಸಿಕೊಂಡದ್ದೇ ಹರಿಕಥೆಯ ಉಗಮಕ್ಕೆ ಕಾರಣವಿರುವಂತೆ ತೋರುತ್ತದೆ. ವೈಷ್ಣವ ಮತವನ್ನೂ ವಿಷ್ಣುವಿನ ಕಥೆಗಳನ್ನೂ ಪ್ರಚಾರ ಮಾಡುತ್ತ ನೀತಿಬೋಧೆಯನ್ನೂ ಮಾಡಲು ಅವರಿಗೆ ಜಾನಪದ ಮಾದರಿ ಗಳು ಬಹಳ ಸಹಾಯಕವಾದುವು. ಅಲ್ಲಿ ಅವರ ವೈಯಕ್ತಿಕ ಭಕ್ತಿಯ ಅಭಿವ್ಯಕ್ತಿಗೂ ಅವಕಾಶವುಂಟು; ಅದರ ಜೊತೆಗೆ, ಅವರ ಸಾಮಾಜಿಕ ಉದ್ದೇಶವೂ ಸಫಲವಾಗು ತ್ತಿತ್ತು. ಹರಿದಾಸರ ಶಿಷ್ಟ ವೈಷ್ಣವ ಭಕ್ತಿ ಮತ್ತು ಜಾನಪದ ಕಲಾ ಪ್ರಕಾರಗಳ

ಸಂಲಗ್ನದಿಂದ ಅಥವಾ ಕಸಿಯಿಂದ ಹರಿಕಥೆ ಉಗಮಗೊಂಡಿರುವಂತೆ ತೋರುತ್ತದೆ. ಮನೆಯಿಂದ ಮನೆಗೆ ಭಿಕ್ಷೆಗಾಗಿ ಹೋಗುತ್ತಿದ್ದ ಹರಿದಾಸರು ದೇವಸ್ಥಾನದಂತಹ ಕಡೆ ನಿಂತು ತಾವು ಹೇಳಬಯಸುವ ಕತೆಯನ್ನು ನಾಟ್ಯೀಕರಿಸಲು ಯತ್ನಿಸಿದಾಗ ಹರಿಕಥೆ ಹುಟ್ಟಿರಬೇಕು. ಹೀಗೆ ನಾಟ್ಯೀಕರಿಸಲು ಅವರಿಗೆ ಪ್ರಚೋದನೆ ಅವರ ಸುತ್ತಮುತ್ತ ಇದ್ದ ಸಾಮಾನ್ಯ ಜನತೆಯ ಜಾನಪದ ಕಲಾ ಪ್ರಕಾರಗಳೇ ಆಗಿದ್ದುವು. ಈ ನಿರೂಪಣೆ ಅರೆಜಾನಪದ ಗುಣದ ಹರಿಕಥೆಯ ಮಾರ್ಗೀ ಮತ್ತು ದೇಶೀಗುಣಗಳೆರಡನ್ನೂ ವಿವರಿಸುತ್ತದೆ. ಶಿಷ್ಟ ಮತ್ತು ಜಾನಪದಗಳ ಸಂಯೋಗದಿಂದ "ಜನಪ್ರಿಯ"ವು ಮೂಡಿಬಂದಿರುವುದಕ್ಕೆ ಹರಿಕಥೆ ಒಳ್ಳೆಯ ನಿದರ್ಶನವಾಗುತ್ತದೆ.

ಈ ಸಂಯೋಗ ನಡೆದದ್ದು ಸುಮಾರು ಕ್ರಿ. ಶ. 1400–1500 ರ ಅವಧಿಯಲ್ಲಿ. "ಹರಿದಾಸ", "ಹರಿಕೀರ್ತನೆ", "ಹರಿಕಥೆ" ಮಾತುಗಳಿಗೆ ವಿಶೇಷಾರ್ಥ ಬಂದುದು ಆ ಕಾಲದ ಹರಿದಾಸ ಚಳವಳಿಯಲ್ಲಿ. ಹರಿಕಥೆಯ ಉಗಮಸ್ಥಾನವು ಕರ್ನಾಟಕವೇ ಎಂಬುದನ್ನು ಬೇಲೂರು ಕೇಶವದಾಸ್[23], ಬಿ. ಶಿವಮೂರ್ತಿ ಶಾಸ್ತ್ರೀ[24] ಮತ್ತು ಎಂ. ವಿ. ಸೀತಾರಾಮಯ್ಯ[25]ನವರು ವ್ಯಕ್ತಪಡಿಸಿದ್ದು ಅವರು ಯಾರೂ ಆಧಾರ ಸಹಿತವಾಗಿ ವಾದ ಮಾಡದಿದ್ದರೂ ಅವರ ಅನ್ನಿಸಿಕೆ ಮಾತ್ರ ನಿರಾಧಾರವಾದುದಲ್ಲವೆಂಬುದು ಗಮನಾರ್ಹ. ಬೇಲೂರು ಕೇಶವದಾಸ್ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ಬಿಜಾಪುರ ಜಿಲ್ಲೆಯ ಭೀಮಪ್ಪ ಗೋಸಾವಿ ಮತ್ತು ತಿಮ್ಮಪ್ಪ ಗೋಸಾವಿ ಎಂಬ ಇಬ್ಬರ ಹರಿಕಥೆಗಳನ್ನು ಮರಾಠಿ ಶ್ರೀಮಂತರ ಆಸ್ಥಾನಗಳಲ್ಲಿ ಕಂಡು ಆಕರ್ಷಿತವಾದ ಮರಾಠಿಗರು ತಾವೂ ತಮ್ಮ ಭಾಷೆಯಲ್ಲಿ ಹರಿಕಥೆಯನ್ನು ರೂಢಿಸಿಕೊಂಡರೆಂದು "ಮಹಾರಾಷ್ಟ್ರದ ಇತಿಹಾಸದಿಂದ ಗೊತ್ತಾಗುತ್ತದೆ"[26] ಎನ್ನುತ್ತಾರೆ. ಇದರ ಸತ್ಯಾಸತ್ಯತೆಯೇನೇ ಇರಲಿ, ಕರ್ನಾಟಕದಲ್ಲಿ ಉಗಮಗೊಂಡ ಹರಿಕಥೆಯು ಮಹಾರಾಷ್ಟ್ರಕ್ಕೆ ಹೋಗಿ ಅಲ್ಲಿಂದ ಆಂಧ್ರಕ್ಕೆ, ತಮಿಳುನಾಡಿಗೆ, ತಮಿಳುನಾಡಿನಿಂದ ಕೇರಳಕ್ಕೆ ಹೋದಂತೆ ತೋರುತ್ತದೆ. ಹರಿಕಥೆಗೆ ಉಗಮಸ್ಥಾನವಾದ ಉತ್ತರ ಕರ್ನಾಟಕವು ಮಹಾರಾಷ್ಟ್ರಕ್ಕೆ ಹೊಂದಿಕೊಂಡಂತಿದೆಯಷ್ಟೇ ಅಲ್ಲ, ಇಂದಿನ ದಕ್ಷಿಣ ಮಹಾರಾಷ್ಟ್ರವು ವಾಸ್ತವವಾಗಿ ಕರ್ನಾಟಕದ ಭಾಗವೇ ಆಗಿತ್ತೆಂಬುದನ್ನೂ ಇಲ್ಲಿ ನೆನೆಯಬೇಕು.* ○

---

23. ಶ್ರೀ ಕರ್ನಾಟಕ ಭಕ್ತವಿಜಯ– ನೋಡಿ.
24. ಕರ್ನಾಟಕ ಸಂದರ್ಶನ, I, ಬೆಂಗಳೂರು. 1952, ಪು. 309.
25. "Harikathe' (an article still in manuscript)
26. ಶ್ರೀ ಕರ್ನಾಟಕ ಭಕ್ತವಿಜಯ, ಮೈಸೂರು. 1974, ಪು. 225–6.

* ಮಾರ್ಚ್ 27, 1983ರಂದು ಬೆಂಗಳೂರು ಭಾರತೀಯ ವಿದ್ಯಾಭವನ ಮತ್ತು ಸಂಗೀತ ನಾಟಕ ಅಕಾಡೆಮಿ ಆಶ್ರಯದಲ್ಲಿ ನಡೆದ ರಾಷ್ಟ್ರಮಟ್ಟದ "ಕಥಾಕೀರ್ತನ್" ವಿಚಾರಸಂಕಿರಣದ ಮೊದಲ ಗೋಷ್ಠಿಯ ಅಧ್ಯಕ್ಷಸ್ಥಾನದಿಂದ ಓದಿದ ಸಂಪ್ರಬಂಧದ ಕನ್ನಡರೂಪ.

# ಸಂಗೀತ–ಸಾಹಿತ್ಯ

(ಉಭಯ ಸಮಾನ ಮೂಲ ಮತ್ತು ಅಂಶಗಳು)

---

ಪ್ರೊ|| ಎಂ. ವಿ. ಸೀತಾರಾಮಯ್ಯ

ಕರ್ನಾಟಕ ಸಂಗೀತ ಎಂದು ಪ್ರಸಿದ್ಧವಾಗಿರುವ ದಕ್ಷಿಣಾದಿ ಸಂಗೀತವು ಶಬ್ದಾರ್ಥಸಹಿತವಾದ ಸಾಹಿತ್ಯಕ್ಕೂ, ಶ್ರುತಿ–ಸ್ವರ ಸಂಘಾತವಾದ ರಾಗಕ್ಕೂ ಸಮಪ್ರಾಧಾನ್ಯವನ್ನು ಕೊಟ್ಟಿದೆ. ಬಳಕೆಯಲ್ಲಿರುವ ಸಂಗೀತದ ಪರಿಭಾಷೆಯನ್ನು ಉಪಯೋಗಿಸಿ ಹೇಳುವುದಾದರೆ 'ಮಾತು' ಮತ್ತು 'ಧಾತು'ಗಳ ಮಧುರವೂ ಸಮರಸವೂ ಆದ ಸಂಲಗ್ನದಿಂದ ಸಿದ್ಧಿಸುವ ಕಲೆಯೇ ಕರ್ನಾಟಕ ಸಂಗೀತ ಎಂದು ಸ್ಥೂಲವಾಗಿ ಹೇಳಬಹುದು. ಉತ್ತರಾದಿ ಅಥವಾ ಹಿಂದೂಸ್ತಾನಿ ಸಂಗೀತಸಂಪ್ರದಾಯದಲ್ಲಿ ರಾಗವಿನ್ಯಾಸಕ್ಕೆ ಪರಮ ಪ್ರಾಧಾನ್ಯ. ಒಂದೇ ಆಗಿದ್ದ ಭಾರತೀಯ ಸಂಗೀತವು ಕವಲೊಡೆದು ಎರಡು ಸಂಪ್ರದಾಯಗಳು ರೂಪುಗೊಂಡವು. ಈ ದ್ವಿಮುಖವಾದ ಬೆಳವಣಿಗೆಯ ಐತಿಹಾಸಿಕ ವಿಶ್ಲೇಷಣೆಗೆ ನಾನು ತೊಡಗುವುದಿಲ್ಲ. ಐತಿಹಾಸಿಕ ಕಾರಣಗಳ ಫಲವಾಗಿ ನಮ್ಮ ಕನ್ನಡನಾಡು ಬೇರೆ ಬೇರೆ ಸಂಪ್ರದಾಯಗಳ ಚಿತ್ರಕಲೆಗೂ, ಶಿಲ್ಪಕಲೆಗೂ ನೆಲೆವೀಡಾಗಿರುವಂತೆ, ಸರ್ವಧರ್ಮಗಳ ಸಂಗಮಸ್ಥಾನವಾಗಿರುವಂತೆ ಕನ್ನಡ, ಸಂಸ್ಕೃತ, ತೆಲುಗು, ತಮಿಳು, ಮರಾಠಿ, ತುಳು, ಕೊಂಕಣಿ ಮುಂತಾಗಿ ಹಲವು ಭಾರತೀಯ ಭಾಷೆಗಳ ವಾಗ್ವಿಲಾಸಕ್ಕೆ ಆಶ್ರಯವಿತ್ತಿರುವಂತೆ, ಉತ್ತರಾದಿ ದಕ್ಷಿಣಾದಿ ಸಂಪ್ರದಾಯಗಳೆರಡಕ್ಕೂ ಆಡುಂಬೊಲವಾಗಿರುವುದು ಹೆಮ್ಮೆಪಡತಕ್ಕ ಸಂಗತಿಯೇ. ಅಂತೆಯೇ, ಕರ್ಣಾಟಕ ಸಂಗೀತವು ಕನ್ನಡನಾಡೂ ಸೇರಿದಂತೆ ದಕ್ಷಿಣದ ಬೇರೆ ಬೇರೆ ಭಾಷಾ ಪ್ರದೇಶಗಳಲ್ಲಿ ಎಂದಿನಿಂದಲೂ ಪ್ರಚುರವಾಗಿರುವುದು ಮಾತ್ರವಲ್ಲದೆ ಅಲ್ಲಿನವರಾದ ವಾಗ್ಗೇಯಕಾರರಿಂದಲೂ, ಸಂಗೀತ ವಿದ್ವಾಂಸರಿಂದಲೂ ಸಂವರ್ಧನೆಗೊಂಡು ಜಗತ್ತಿನ ಸಂಗೀತ ಪ್ರಪಂಚದಲ್ಲಿ ಗಣ್ಯಸ್ಥಾನವನ್ನು ಪಡೆದಿರುವುದು ಎಲ್ಲರೂ ಬಲ್ಲ ಸಂಗತಿ! ವಸ್ತುಸ್ಥಿತಿ ಹೀಗಿದ್ದರೂ ದಕ್ಷಿಣಾದಿ ಸಂಗೀತವು ಜಗತ್ತಿನಲ್ಲಿ ಆ ಹೆಸರಿನಿಂದ ಪ್ರಸಿದ್ಧಿ ಪಡೆಯದೆ **ಕರ್ಣಾಟಕ ಸಂಗೀತ** ಎಂದು ಪ್ರಖ್ಯಾತವಾಗಿರುವುದು ಕನ್ನಡಿಗರಾದ ನಾವೆಲ್ಲರೂ ಹೆಮ್ಮೆ ಪಡಬೇಕಾದ ಸಂಗತಿ. ಕರ್ಣಾಟಕ ಸಂಗೀತದ ತ್ರಿಮೂರ್ತಿಗಳೆಂದು ಪ್ರಖ್ಯಾತರಾದ ತ್ಯಾಗರಾಜಾದಿಗಳಿಗೂ ಪೂರ್ವದಲ್ಲಿ ಕನ್ನಡಿಗರೇ ಆದ ಶಿವಶರಣರೂ, ನಿಜಗುಣ ಶಿವಯೋಗಿಗಳೂ, 'ಕರ್ಣಾಟಕ ಸಂಗೀತ ಪಿತಾಮಹ'ರೆಂದು ಪ್ರಖ್ಯಾತರಾಗಿರುವ ಪುರಂದರದಾಸರೂ, ತಮ್ಮ ಲಕ್ಷ್ಯರಾಶಿಯ ನಿರ್ಮಾಣದಿಂದ ಕರ್ಣಾಟಕ ಸಂಗೀತ ಸೌಧಕ್ಕೆ ಭವ್ಯವಾದ ಬುನಾದಿಯನ್ನು ಕಲ್ಪಿಸಿದುದೂ, ಪ್ರಾಚೀನ ಸಂಗೀತ ಲಕ್ಷಣಗ್ರಂಥಗಳ ಕರ್ತೃಗಳಲ್ಲಿ

ಬಹುಸಂಖ್ಯೆಯುವರು ಪ್ರಾಯಿಕವಾಗಿ ಕನ್ನಡನಾಡಿನವರಾಗಿರುವುದೂ–ಕರ್ಣಾಟಕ ಸಂಗೀತಕ್ಕೆ ಆ ಹೆಸರು ಸಂಘಟಿಸಿ ಸ್ಥಾಯಿಯಾಗಿ ನಿಲ್ಲಲು ಮುಖ್ಯ ಕಾರಣಗಳೆಂದು ತೋರುತ್ತದೆ.

ಸ್ತ್ರೀಪುರುಷರ ಲಗ್ನವಾದ ಮೇಲೆ ಅವರ ದಾಂಪತ್ಯಜೀವನಕ್ಕೆ ಸಂಬಂಧಪಟ್ಟಂತೆ ಸಮಸ್ಯೆಗಳು ತಲೆದೋರುವಂತೆ ಧಾತು ಮತ್ತು ಮಾತುಗಳ ಸಂಲಗ್ನಕ್ಕೆ ಸಂಬಂಧಪಟ್ಟಂತೆ ಕೆಲವು ಸಮಸ್ಯೆಗಳು ಉದ್ಭೂತವಾಗುವುದು ಸಹಜವಾಗಿಯೇ ಇದೆ. ವಾಸ್ತವವಾಗಿ ಸಾಹಿತ್ಯ–ಸಂಗೀತಗಳ (ಮಾತು-ಧಾತುಗಳ) ಸಂಲಗ್ನ ಅನುಕೂಲ ದಾಂಪತ್ಯ; ಅವುಗಳ ಹೊಂದಾಣಿಕೆ ಸಹಜ ಸಿದ್ಧವಾದುದು. ಈ ಹೊಂದಾಣಿಕೆಯ ಸ್ವರೂಪವನ್ನು ಸ್ವಲ್ಪ ಒಳಹೊಕ್ಕು ನೋಡುವುದು ಅಗತ್ಯ. ಹಾಗೆ ನೋಡಿದಾಗ ಸಮಸ್ಯೆಗಳ ಸ್ವರೂಪವನ್ನು ಅರ್ಥಮಾಡಿಕೊಳ್ಳಲು ಸಹಾಯವಾಗುತ್ತದೆ.

ಚಿತ್ರಕಲೆ, ಶಿಲ್ಪ, ಕಾವ್ಯ, ವಾಸ್ತುಶಿಲ್ಪಗಳಂತೆ ಸಂಗೀತವೂ ಒಂದು ಕಲೆ. ಕಲೆ ಎಂದರೆ ಏನು? ಈ ಪ್ರಶ್ನೆಗೆ, ಶಾಸ್ತ್ರದಿಂದ ಭಿನ್ನವಾದುದು ಕಲೆ ಎಂಬುದು ಮೊದಲು ಹೊಳೆಯುವ ಉತ್ತರ; ಶಾಸ್ತ್ರ ಬುದ್ಧಿಗೋಚರವಾದದ್ದು; ಕಲೆ, ಹೃದಯಗಮ್ಯವಾದದ್ದು. ಸಂಗೀತದಲ್ಲೂ ಶಾಸ್ತ್ರಭಾಗ ಉಂಟಷ್ಟೆ. ಅದು ಸಂಗೀತದ ಬಿಡಿಭಾಗಗಳನ್ನು, ಅದರ ಘಟಕಗಳನ್ನು, ಎಂದರೆ, ಶ್ರುತಿ, ಸ್ವರ, ವರ್ಣ, ಅಲಂಕಾರ, ರಾಗ ಮುಂತಾದ ಅಂಶಗಳನ್ನು ವಿವರಿಸುತ್ತದೆ. ಇವುಗಳ ತಿಳಿವಳಿಕೆಯಷ್ಟೇ ಗಾನವಾಗುವುದಿಲ್ಲ, ಸಂತೋಷವನ್ನು ನೀಡುವುದಿಲ್ಲ. ಕಾಲಕಾಲಕ್ಕೆ ಪ್ರಯೋಗಾನುಭವದಿಂದ ರೂಪುಗೊಂಡ ಶಾಸ್ತ್ರಜ್ಞಾನದ ಆಧಾರದ ಮೇಲೆ ದೈವದತ್ತವಾದ ಅಥವಾ ನೈಸರ್ಗಿಕವಾದ ಪ್ರತಿಭಾಬಲದಿಂದ 'ರಾಗಸುಧಾರಸ'ವನ್ನು ನಿರ್ಮಿಸಿ, ಅದನ್ನು ಏಕಕಾಲದಲ್ಲಿ ತಾನೂ ಸವಿದು, ಶ್ರೋತೃಗಳನ್ನೂ ಆನಂದಸಾಗರದಲ್ಲಿ ಮುಳುಗಿಸಬಲ್ಲವನೇ ಸಂಗೀತ ಕಲಾವಿದ, ಗಾನಕುಶಲಿ. ರೇಖೆಗಳನ್ನು, ವರ್ಣಗಳನ್ನು ಕಣ್ಣಿಗೆ ಹಬ್ಬವಾಗುವಂತೆ ಸಂಯೋಜಿಸಬಲ್ಲವನು ಚಿತ್ರಕಲಾವಿದ. ಲೋಹದಿಂದಾಗಲೀ, ದಾರುವಿನಿಂದಾಗಲಿ ಮೂರ್ತಿನಿರ್ಮಾಣ ಮಾಡಬಲ್ಲವನು ಮೂರ್ತಿಶಿಲ್ಪಿ (sculptor). ಎಲ್ಲರೂ ಬಳಸುವ ಮಾತುಗಳನ್ನು ಅವುಗಳ ವಾಚ್ಯಾರ್ಥಕ್ಕಿಂತ ಭಿನ್ನವಾದ ರಮಣೀಯಾರ್ಥವು ಪ್ರತಿಪಾದ್ಯವಾಗುವಂತೆ ಜೋಡಿಸಬಲ್ಲವನು ಕವಿ. ಕವಿ ಕರ್ಮ ಕಾವ್ಯ. ಹೀಗೆ, ಕಲೆ ಯಾವುದೇ ಆಗಲಿ, ಬಿಡಿಬಿಡಿಯಾದ ಅಂಶಗಳನ್ನು, ಸೌಂದರ್ಯರಹಿತ ವ್ಯಷ್ಟಿಯನ್ನು ಸಮುದಾಯ ಅಥವಾ ಸಮಷ್ಟಿಸೌಂದರ್ಯವಾಗಿ ಪರಿಣಮಿಸುವಂತೆ ಸಂಯೋಜಿಸುವ ಪ್ರಜ್ಞಾಪೂರ್ವಕ ಕುಶಲ ಕರ್ಮವು ಕಲೆ ಎನಿಸಿಕೊಳ್ಳುವುದು. ಇದನ್ನೇ ಒಬ್ಬ ಕಾವ್ಯಶಾಸ್ತ್ರಜ್ಞ "ಕಲಾ ಸಂಕಲನಾಪ್ರಜ್ಞಾ" ಎಂದು ಸೂತ್ರೀಕರಿಸುವುದು.

ಈ ವಿವಿಧ ಕಲೆಗಳು ಭಿನ್ನಭಿನ್ನವಾಗಿ ಕಂಡರೂ, ಇವುಗಳ ನಡುವೆ ಗುರುತಿಸಬಹುದಾದ ಒಂದು ಸಾಮಾನ್ಯ ಗುಣಧರ್ಮ ಉಂಟು; ಸಂಬಂಧ ಪಾರಸ್ಪರ್ಯ ಉಂಟು. ಪ್ರತಿಯೊಂದು ಕಲೆಯಲ್ಲಿಯೂ ಬಂಧಬಂಧುರತೆ, ಶಿಲ್ಪಸೌಂದರ್ಯ ಅಂತರ್ಗತವಾಗಿರುತ್ತದೆ. ಇವನ್ನು architectural beauty ಎನ್ನಬಹುದು. ಈ ಗುಣಧರ್ಮವನ್ನು ಗುರುತಿಸಲು ಆಯಾ ಕಲೆಯ ಸ್ವರೂಪ ಪರಿಜ್ಞಾನವೂ ಸೂಕ್ಷ್ಮ ಗ್ರಹಣ ಶಕ್ತಿಯೂ ಬೇಕು. ಉದಾಹರಣೆಗೆ, ರಾಗವಿನ್ಯಾಸವನ್ನು ಸ್ವರಸಂಗತಿಗಳ ಸುಂದರವಾದ ಗೋಪುರ, ಪದ್ಯವನ್ನು ಮಾತುಗಳ ಮಂಟಪ, ಎನ್ನಬಹುದು. ಸ್ವರಗಳ ಆರೋಹಣ ಅವರೋಹಣಗಳಲ್ಲಿ ಅಂಶ, ಗ್ರಹ, ನ್ಯಾಸ, ಗಮಕ ಮುಂತಾದ ಪ್ರಕ್ರಿಯೆಗಳು ಹೇಗೆ ಜೋಡನೆಗೊಂಡು ಕೆಲಸ ಮಾಡುತ್ತವೆ ಎನ್ನುವುದರ ಪರಿಜ್ಞಾನ ವಿಲ್ಲದಿದ್ದರೆ ರಾಗರಂಜನೆಯ ರಹಸ್ಯ ಅರಿವಿಗೆ ಬರುವುದಿಲ್ಲ.

ಇನ್ನೊಂದು ದೃಷ್ಟಿಕೋನದಿಂದ ಕಲೆಗಳ ಸಾದೃಶ್ಯ-ವೈದೃಶ್ಯಗಳನ್ನು ಗುರುತಿಸಬಹುದು. ಮೂರ್ತಿಶಿಲ್ಪ, ವಾಸ್ತುಶಿಲ್ಪ, ಚಿತ್ರಕಲೆ—ಇವು ದೃಶ್ಯಮಾನ ಕಲೆಗಳು (visual arts). ಇವುಗಳ ನಿರೂಪಣಕ್ಕೆ ಇಷ್ಟೋ ಅಷ್ಟೋ ಸ್ಥಳಾವಕಾಶ ಬೇಕು. ಈ ಮೂರು ಕಲೆಗಳು ಪರಸ್ಪರಾವಲಂಬಿಗಳಾಗಿ ಧಾರ್ಮಿಕ ಪರಿಸರದಲ್ಲಿ ಬೆಳೆದು ಬಂದಿವೆ. ದೇವಾಲಯ, ಚರ್ಚು, ಮಸೀದಿಗಳು ಇದಕ್ಕೆ ನಿದರ್ಶನಗಳು. ಪ್ರಾಚೀನ ಭಾರತದ ದೇವಾಲಯ ನಿರ್ಮಾಣ ಕಾರ್ಯದಲ್ಲಿ ಈ ಕಲೆಗಳು ಸಮಸಮವಾಗಿ ಪಾಲುಗೊಂಡು ದುಡಿದಿವೆ. ಪಾರಮಾರ್ಥಿಕ ದೃಷ್ಟಿಯುಳ್ಳವಾಗಿ, ಒಂದು ಉನ್ನತ ಮಟ್ಟವನ್ನು ಮುಟ್ಟಿ, ಭವ್ಯವಾದ ಭಾರತೀಯ ವಾಸ್ತುಶಿಲ್ಪ ಸಂಪ್ರದಾಯವನ್ನು ಸೃಷ್ಟಿಮಾಡಿವೆ. ಸಾಹಿತ್ಯ, ಸಂಗೀತಗಳು ಕೂಡ ಧಾರ್ಮಿಕ ಪರಿಸರದಲ್ಲಿಯೇ ಬೆಳೆದು ಬಂದವು.

ಆಧುನಿಕ ಯುಗದಲ್ಲಿ, ಪಾಶ್ಚಾತ್ಯ ನಾಗರಿಕತೆಯ ಪ್ರಭಾವ ಮತ್ತು ಅದನ್ನು ಅನುಸರಿಸುವ ಪ್ರವೃತ್ತಿ—ಈ ಕಾರಣಗಳಿಂದ ಭಾರತೀಯ ಕಲಾಪ್ರಪಂಚ ಧಾರ್ಮಿಕ ಪರಿಸರದಿಂದ ಹೊರಬಂದು ಪ್ರತ್ಯೇಕವಾಗಿ ಬೆಳೆಯತೊಡಗಿದೆ; ಬಲುಮಟ್ಟಿಗೆ ಲೌಕಿಕವಾಗಿ (Utilitarain ಅಥವಾ Secular) ಆಗಿ ಪರಿಣಮಿಸಿದೆ. ವ್ಯಾಪಾರೋದ್ಯಮ ಚಿತ್ರಕಲೆಯನ್ನು ದುಡಿಸಿಕೊಳ್ಳತೊಡಗಿ, ಅದು ವಾಣಿಜ್ಯಕಲೆ (Commercial art) ಎಂಬ ಪ್ರತ್ಯೇಕ ಶಾಖೆಯನ್ನು ಹೊಂದಿದೆ. ಸಂಗೀತ ಪ್ರಪಂಚಕ್ಕೆ ಚಲನಚಿತ್ರ ಪ್ರವೇಶ ಮಾಡಿ 'ಸಿನಿಮಾ ಸಂಗೀತ' ಪ್ರವರ್ಧಮಾನಕ್ಕೆ ಬಂದು ಅತ್ಯಂತ ಜನಪ್ರಿಯವಾಗುತ್ತಿದೆ. ಸಾಹಿತ್ಯ ಪ್ರಪಂಚದ ಕಡೆಗೆ ದೃಷ್ಟಿಯನ್ನು ಹಾಯಿಸಿದರೆ, ಪತ್ರಿಕಾ ಪ್ರಪಂಚ ಒಂದು ಕಡೆ ಅದಕ್ಕೆ ಪೋಷಕವಾಗಿ ಅದರ ಪ್ರಸಾರವ್ಯಾಪ್ತಿಯನ್ನು ವಿಸ್ತರಿಸುತ್ತಿದ್ದರೂ, ಇನ್ನೊಂದು ಕಡೆ ಸಾಹಿತ್ಯದಲ್ಲಿ ಕೆಲವು ಅನಪೇಕ್ಷಣೀಯವಾದ ಲಕ್ಷಣಗಳಿಗೆ ಉತ್ತೇಜನ ನೀಡುತ್ತಿಲ್ಲವೆ? ಎಂಬ ಪ್ರಶ್ನೆಯನ್ನು ಪರಿಶೀಲಿಸಬೇಕಾಗಿದೆ.

ಕನ್ನಡ ಸಾಹಿತ್ಯದ ಭಾವಗೀತೆ ಸಂಗೀತವನ್ನು ಆಶ್ರಯಿಸಿ, ಲಘುಸಂಗೀತ ಪ್ರಕಾರವೊಂದರ ಬೆಳವಣಿಗೆಗೆ ಆಸ್ಪದವಾಗಿದೆ. ಈ ಪ್ರಕಾರದ ಬೆಳವಣಿಗೆಯಲ್ಲಿ ಸಂಗೀತ ವಿದ್ವಾಂಸರ ಮತ್ತು ಸಂಗೀತಗಾರರ ಪಾತ್ರ ಗಣ್ಯವಾಗಿದೆ. ವಾದ್ಯಸಂಗೀತದಲ್ಲಿ ವಾದ್ಯವೃಂದವಾದನ (orchestra) ಮತ್ತು ಸಿನಿಮಾ ಸಂಗೀತ ಲಘುಸಂಗೀತಗಳು ಅದನ್ನು ಬಳಸಿಕೊಳ್ಳುತ್ತಿರುವ ವಿಧಾನ (orchestration)–ಇವು ಒಂದು ಹೊಸ ಬೆಳವಣಿಗೆ. ಕಲಾಪ್ರಪಂಚಕ್ಕೆ ಮೊತ್ತದಲ್ಲಿ ಅನ್ವಯಿಸುವಂತೆ ಹೇಳುವುದಾದರೆ, ಅಲ್ಲಿ ಹೊಸಗಾಳಿ ಬೀಸುತ್ತಿದೆ; ಪ್ರಯೋಗಶೀಲತೆ ತೀವ್ರವಾಗಿದೆ; ಕಲೆಯನ್ನು ಜನಪ್ರಿಯಗೊಳಿಸುವ ತವಕವೂ ಕಂಡುಬರುತ್ತಿದೆ. ಈ ಯಾವ ಬೆಳವಣಿಗೆಯನ್ನೂ ಯಾರೂ ತಡೆಯಲಾರರು. ಕಲಾಪ್ರಪಂಚದ ಭಾರತೀಯತೆಗೆ, ಉನ್ನತ ಸಂಪ್ರದಾಯಕ್ಕೆ, ಹೊಸ ಬೆಳವಣಿಗೆಗಳಿಂದ ಧಕ್ಕೆಯುಂಟಾಗುವ ಸಂಭವವಿಲ್ಲವೆ ಎಂಬ ಪ್ರಶ್ನೆಯನ್ನು ಕಲಾಭಿಮಾನಿಗಳೆಲ್ಲ ಪರಿಶೀಲಿಸಬೇಕಾಗಿದೆ. ಮುಖ್ಯವಾಗಿ ಸಂಗೀತ ಪ್ರಪಂಚದಲ್ಲಿ, ಈಗ ಗಮನಿಸಿದ ಪರಿವರ್ತನಶೀಲ ಲಕ್ಷಣಗಳ ಹಿನ್ನೆಲೆಯಲ್ಲಿ, ವಿಶೇಷವಾಗಿ ಸಾಹಿತ್ಯ ಸಂಗೀತಗಳ ನಿಕಟ ಬಾಂಧವ್ಯಕ್ಕೆ ಸಂಬಂಧಪಟ್ಟಂತೆ, ವೇದಯುಗದಿಂದ ತೊಡಗಿ ಇಂದಿನವರೆಗೆ ವಿಕಾಸಶೀಲವಾಗಿ ಬೆಳೆದು ಬಂದು ಒಂದು ಭವ್ಯವೂ ಸರ್ವಸಮರ್ಪಕವೂ ವಿಶ್ವಮಾನ್ಯವೂ ಆದ ನೆಲೆಗಟ್ಟಿನ ಮೇಲೆ ನಿಂತಿರುವ ಶಾಸ್ತ್ರೀಯ ಸಂಗೀತಪದ್ಧತಿಯ ಭವಿಷ್ಯವನ್ನು ಕುರಿತು ಅದರ ಅಭಿಮಾನಿಗಳೆಲ್ಲ ನಿರುಪಾಧಿಕವಾಗಿ ಚಿಂತಿಸಬೇಕಾಗಿದೆ. ಈ ಮಾತು ಉತ್ತರಾದಿ ಸಂಗೀತಕ್ಕಿಂತ ದಕ್ಷಿಣಾದಿ ಸಂಗೀತಕ್ಕೆ ಹೆಚ್ಚಾಗಿ ಅನ್ವಯಿಸುತ್ತದೆ. ಏಕೆಂದರೆ ದಕ್ಷಿಣಾದಿ ಅಥವಾ ಕರ್ಣಾಟಕ ಸಂಗೀತದಲ್ಲಿ, ಈ ಮೊದಲೇ ಸೂಚಿಸಿದಂತೆ, ಧಾತು ಮತ್ತು ಮಾತುಗಳಿಗೆ ಒಂದು ಹತ್ತಿರದ ನಂಟು ಬೆಳೆದುಬಂದಿದೆ.

ಸಾಹಿತ್ಯ ಮತ್ತು ಸಂಗೀತ ಕಲೆಗಳು ಶ್ರವ್ಯ ಕಲೆಗಳು. ಒಂದೇ ಕಲಾವೃಕ್ಷದ ಎರಡು ಶಾಖೆಗಳು. ಎರಡರ ಮೂಲ ಮತ್ತು ಮೂಲದ್ರವ್ಯ (source) ಒಂದೇ ಆಗಿದೆ. ಇವುಗಳ ಸಂಬಂಧವನ್ನು ತಾತ್ವಿಕ ಮಟ್ಟದಲ್ಲಿಯೂ ಪ್ರಯೋಗದ ಮಟ್ಟದಲ್ಲಿಯೂ ಸಂಕ್ಷೇಪವಾಗಿಯಾದರೂ ಪರಿಶೀಲಿಸುವುದು ಇಂದಿನ ಸಂದರ್ಭದಲ್ಲಿ, ಮುಖ್ಯವಾಗಿ,—ಸಂಗೀತ ಕೃತಿಗಳನ್ನು ಹಾಡುವಾಗ ಸಾಹಿತ್ಯವನ್ನು ಕೊಲೆ ಮಾಡಬಾರದು ಎನ್ನುವ ಒಂದು ಪಕ್ಷ, ರಾಗಭಾವ ಮುಖ್ಯವೇ ಹೊರತು ಸಾಹಿತ್ಯ ಅಷ್ಟು ಮುಖ್ಯವಲ್ಲ ಎನ್ನುವ ಇನ್ನೊಂದು ಪಕ್ಷ, ಈ ಎರಡು ಪಕ್ಷಗಳ ನಡುವೆ ಏಳಬಹುದಾದ ವಾದ ವಿವಾದಗಳ ಸಂದರ್ಭದಲ್ಲಿ—ಪ್ರಸಕ್ತ ಎನಿಸುತ್ತದೆ.

ಕಾವ್ಯ ಶಬ್ದಕ್ಕೆ ಪರ್ಯಾಯವಾಗಿ ಸಾಹಿತ್ಯ ಶಬ್ದವನ್ನು ಉಪಯೋಗಿಸುವಂತೆ 'ಗಾನ' ಅಥವಾ 'ಗೇಯ' ಶಬ್ದಕ್ಕೆ ಪರ್ಯಾಯವಾಗಿ ಸಂಗೀತ ಶಬ್ದವನ್ನು ಬಳಸುವುದು ರೂಢಿ. ಶಾಸ್ತ್ರದೃಷ್ಟಿಯಿಂದ ಇದು ಸರಿಯಲ್ಲ; ಆದರೆ ರೂಢಿ ಬಲವತ್ತರವಾದುದು. ವಾಸ್ತವವಾಗಿ ನೃತ್ಯ ಗೀತ ವಾದ್ಯಗಳ ಸಮುಚ್ಚಯವೇ ಸಂಗೀತ. ಇದು ಶಾಸ್ತ್ರಕಾರರ

ಅಭಿಮತ. ಗೀತವು ಗೇಯಾಂಶ ಮತ್ತು ಸಾಹಿತ್ಯಾಂಶಗಳಿಂದ ಕೂಡಿ ಆಗಿರುವ ರಚನೆ. ಕಾವ್ಯ ಮತ್ತು ಗಾಯನ ಕಲೆಗಳು ನಾಟ್ಯವನ್ನು ಆಶ್ರಯಿಸಿ ಜೊತೆಗೂಡಿ ಬೆಳೆದು ಬಂದುವು, ನಮ್ಮ ದೇಶದಲ್ಲಿ. ನಾಟ್ಯಾಭಿನಯದಲ್ಲಿ ಶಾರೀರಿಕ ಅಭಿನಯದೊಂದಿಗೆ ವಾಚಕಾಭಿನಯವೂ ಸೇರಿಕೊಂಡಿದೆ. ಆದ್ದರಿಂದಲೇ ಇರಬೇಕು, ಗಾಯನಕ್ಕೆ ಎಂದರೆ ಶುದ್ಧ ರಾಗಾಲಪ್ತಿಗೆ ಸಂಬಂಧ ಪಡದ, ಆದರೆ ಪದ್ಯಕಾವ್ಯರಚನೆಗೆ ಅಗತ್ಯವಾದ ಛಂದಸ್ಸು ಮತ್ತು ಕಾವ್ಯಾಲಂಕಾರಗಳನ್ನು ಭರತ ಮುನಿ ತನ್ನ ನಾಟ್ಯಶಾಸ್ತ್ರದಲ್ಲಿ ಸಮಾವೇಶಗೊಳಿಸಿ ಅವುಗಳ ಲಕ್ಷಣವನ್ನು ವಿವರಿಸಿದ್ದಾನೆ. ನಾಟ್ಯದ ನೃತ್ಯಭಾಗಕ್ಕೆ ತಾಳಲಯವು ಅವಿಭಾಜ್ಯ ಅಂಗವಾಗಿ ಕೂಡಿಕೊಂಡಿರುವುದು ಸುವೇದ್ಯ. ನೃತ್ಯದ ಈ ತಾಳಲಯವು ಛಂದೋಲಯಸಮನ್ವಿತ ಪದ್ಯಭಾಗಕ್ಕೆ ಹೊಂದಿಕೊಂಡು ಈ ಲಯಾಂಶವು ಕಾಲಕ್ರಮದಲ್ಲಿ ನಾಟ್ಯದ ಗೇಯಭಾಗಕ್ಕೂ ಕಾವ್ಯಭಾಗಕ್ಕೂ ಸೇತುವಾಗಿ ಪರಿಣಮಿಸಿ, ಕರ್ಣಾಟಕ ಸಂಗೀತಕೃತಿರಚನೆಯ ಪರಂಪರೆಗೆ ಬುನಾದಿಯಾಯಿತೆಂದು ತೋರುತ್ತದೆ. ಈ ವಿಕಾಸಕ್ರಮವನ್ನು ಸಂಶೋಧನೆ ಮಾಡಿ ಸವಿವರವಾಗಿ, ಸಾಕ್ಷ್ಯಾಧಾರಗಳ ಸಮೇತ ಪ್ರಸ್ಥಾಪನೆ ಮಾಡುವ ಕಾರ್ಯ ನಡೆಯಬೇಕಾಗಿದೆ.

ಈತನಕ ಪ್ರಸ್ತಾಪಿಸಿದ ಸಂಗೀತ-ಸಾಹಿತ್ಯಗಳ ಬಾಂಧವ್ಯ ಸ್ವರೂಪ ನಿರ್ಣಯವು ಬಾಹ್ಯ ಪರಿಸರಕ್ಕೆ ಸಂಬಂಧಪಟ್ಟದ್ದು. ಈ ಕಲಾದ್ವಯದ ಸೋದರಿಕೆಯ ನಂಟು ಮೂಲಭೂತವಾಗಿ ಒಂದೇ ಆಕರದಿಂದ ಮೂಡಿಬಂದದ್ದು ಎಂಬುದನ್ನು ಮನಗಾಣಬೇಕಾಗಿದೆ. ಈ ವಿಚಾರವಾಗಿ ನಾಲ್ಕು ಮಾತನ್ನು ಹೇಳುವುದಿದೆ.

ಸಾಹಿತ್ಯದ ಮೂಲದ್ರವ್ಯ ನಾದಾತ್ಮಕವಾದ ಶಬ್ದ ಮತ್ತು ಅರ್ಥ. 'ಶಬ್ದಾರ್ಥೌ ಸಹಿತೌ ಕಾವ್ಯಂ' ಎಂಬ ಸೂತ್ರ ಪ್ರಸಿದ್ಧವಾದುದು. ಸಂಗೀತದ ಪರಿಭಾಷೆಯಲ್ಲಿ ಸಾಹಿತ್ಯ ಎಂದರೆ "ಮಾತು". ಸಂಗೀತದ ಮೂಲದ್ರವ್ಯವೂ ನಾದವೇ. ಸಂಗೀತ ಶಾಸ್ತ್ರಕಾರರು ಮತ್ತು ಶಬ್ದಶಾಸ್ತ್ರಕಾರರು ಎಂದರೆ ವೈಯಾಕರಣರು ನಾದವು ನಾಭಿಜನ್ಯ ಎಂಬ ಯೋಗಶಾಸ್ತ್ರದ ಸಿದ್ಧಾಂತವನ್ನು ಅನುಮೋದಿಸಿ, ತಂತಮ್ಮ ಶಾಸ್ತ್ರಗಳಲ್ಲಿ ನಾದೋತ್ಪತ್ತಿ ಪ್ರಕರಣವನ್ನು ಅಳವಡಿಸಿಕೊಂಡಿದ್ದಾರೆ. ಅಪ್ರಕಟಿತವಾಗಿರುವ ನಾದವು ಅನಾಹತ ನಾದ. ಇದು 'ಪರಾ' ಎಂದು ಶಾಸ್ತ್ರದಲ್ಲಿ ಉಪಲಕ್ಷಿತವಾಗಿದೆ. ಅನಲಾನಿಲ (ಅಗ್ನಿ ಮತ್ತು ವಾಯು) ಸಂಯೋಗದಿಂದ ಆಹತವಾಗಿ ಊರ್ಧ್ವಮುಖವಾಗಿ ಆರೋಹಿಸಿ ಉರಸ್ಸು ಅಥವಾ ಹೃತ್‌ದೇಶಕ್ಕೆ ಬಂದಾಗ "ಪಶ್ಯಂತಿ" ಎನ್ನಿಸಿಕೊಂಡು ನಾದಾಹತ ಪ್ರಯತ್ನಶೀಲನಾದ ವ್ಯಕ್ತಿಯ ಅನುಭವಕ್ಕೆ ಮಾತ್ರ ಬರತಕ್ಕದಾಗಿದೆ; ಅದು ಇತರರಿಗೆ ಅಶ್ರುತ. ನಾದವು ಕಂಠಸ್ಥವಾದಾಗ 'ಶ್ರುತಿ' ಎಂಬ ಅಭಿದಾನವನ್ನು ಪಡೆಯುತ್ತದೆ. ಇತರರಿಗೂ ಶ್ರವಣಸಾಧ್ಯವಾದುದರಿಂದ 'ಶ್ರುತಿ' ಎಂಬ ಅನ್ವರ್ಥಕ ನಾಮವನ್ನು ಹೊಂದಿದೆ. ಕಂಠಸ್ಥ ನಾದಕ್ಕೆ 'ಮಧ್ಯಮಾ' ಎಂದು ಶಾಸ್ತ್ರದ ಪರಿಭಾಷೆ. ಈ ಶ್ರುತಿಗಳು ವಾಸ್ತವವಾಗಿ ಸುಲಭವಾಗಿ ಅಳತೆ ಮಾಡಲಾಗದಷ್ಟು ಅಸಂಖ್ಯಾಕ. ಶಾಸ್ತ್ರದ ಸೌಕರ್ಯಕ್ಕಾಗಿ ಶ್ರುತಿಗಳು

ಇಪ್ಪತ್ತೆರಡು ಎಂದು ಭರತನ ಕಾಲದಿಂದಲೂ ವ್ಯವಹರಿಸಲ್ಪಟ್ಟಿದೆ. ಸಂಗೀತದಲ್ಲಿ ಪ್ರಸಿದ್ಧವಾದ ಸಪ್ತಸ್ವರಗಳು ಈ ಇಪ್ಪತ್ತೆರಡು ನಾದಘಟಕಗಳಿಂದ ಸಂಘಟಿತವಾಗಿವೆ. ಈ ಸಪ್ತಸ್ವರಗಳಿಗೆ ಸರಿಗಮಪದನಿ ಎಂಬವು ಕೇವಲ ಸಂಕೇತಾಕ್ಷರಗಳು, ಹಾಗೂ ಉಚ್ಚಾರ ಸೌಕರ್ಯಕ್ಕೆ ವ್ಯಾಕರಣದ ಅಕ್ಷರಗಳ ಸಹಾಯವನ್ನು ಪಡೆದುದಾಗಿದೆ. ಕಂಠಸ್ಥ ನಾದವು ಶ್ರವ್ಯವಾದ ಧ್ವನಿಯಾಗಿ ಮಾರ್ಪಟ್ಟು ಸ್ವರ ಎನ್ನಿಸಿಕೊಂಡಾಗ 'ಆಡುವ ಭಾಷೆಯು' ಎಂದರೆ ಭಾರತೀಯ ಭಾಷೆಗಳ ವರ್ಣಮಾಲೆಯ ಅ, ಇ, ಉಕಾರ ಇತ್ಯಾದಿ ಹದಿನಾಲ್ಕು ಸ್ವರಗಳಾಗಿಯೂ, 'ಹಾಡುವ ಭಾಷೆಯು' ಎಂದರೆ ಸಂಗೀತದ ಷಡ್ಜಾದಿ ಸಪ್ತಸ್ವರಗಳಾಗಿಯೂ ಶ್ರವ್ಯಗಳಾಗಿ ಪ್ರಕಟಗೊಳ್ಳುತ್ತದೆ. ಆಡುವ ಭಾಷೆಯ ಅ–ಆ, ಇ–ಈ ಇತ್ಯಾದಿ ಸ್ವರಯುಗ್ಮಗಳು ವ್ಯಾಕರಣದಲ್ಲಿ ಸಮಾನಾಕ್ಷರಗಳು ಅಥವಾ ಸವರ್ಣಗಳು ಎಂದು ನಿರ್ದಿಷ್ಟವಾಗಿರುವುದರಿಂದ ವಾಸ್ತವವಾಗಿ ಅವೂ ಸಪ್ತಸ್ವರಗಳೇ. ಈ ಸಪ್ತಯುಗ್ಮ ಸ್ವರಗಳನ್ನು, ಸವರ್ಣಗಳನ್ನು, ಷಡ್ಜಾದಿ ಸಪ್ತಸ್ವರಗಳ ಆರೋಹಣ ಕ್ರಮದಲ್ಲಿ ಉಚ್ಚರಿಸಿದಾಗ ಅವುಗಳಿಗೆ ಸಮಸಮನಾಗಿ ಏರುತ್ತಾ ಹೋಗುವುದನ್ನು ಗಮನಿಸಬಹುದು. ಅ, ಆ–ಷಡ್ಜ, ಇ, ಈ–ರಿಷಭ, ಉ, ಊ-ಗಾಂಧಾರ, ಋ, ೠ–ಮಧ್ಯಮ, ಎ, ಏ–ಪಂಚಮ, ಒ, ಓ–ಧೈವತ, ಐ, ಔ-ನಿಷಾಧ; ಹೀಗೆ ಮಾತು-ಧಾತುಗಳ ಸ್ವರಸಪ್ತಕಗಳನ್ನು ಸ್ಥೂಲವಾಗಿ ಸಮೀಕರಿಸಬಹುದು. ಎರಡಕ್ಕೂ ಒಂದೇ ಧ್ವನಿಮೌಲ್ಯ (phonetic value) ಎಂದಮೇಲೆ ಸಾಹಿತ್ಯ ಸಂಗೀತ ಶರೀರಗಳ ನಾಡಿಮಿಡಿತ, ಹೃದಯ ಒಂದೇ ಎಂದು ಸ್ಪಷ್ಟವಾಗುವುದಿಲ್ಲವೇ? ಈ ಅಂಶವನ್ನು ಪ್ರಾಚೀನ ಅರ್ವಾಚೀನ ಶಾಸ್ತ್ರಕಾರರು ಯಾರಾದರೂ ಗಮನಿಸಿರುವುದು ನನ್ನ ತಿಳವಳಿಕೆಗೆ ಬಂದಿಲ್ಲ. ಈ ಅಂಶ ಪರಿಶೀಲನಾರ್ಹ; ಪ್ರಯೋಗ ಮುಖೇನ ಸಂಶೋಧನಾರ್ಹ. ಇರಲಿ. ಮುಖಸ್ಥವಾಗುವ ಹಂತದಲ್ಲಿ ನಾಭಿಜನ್ಯ ನಾದವು 'ವೈಖರೀ' ಎಂದು ನಿರ್ದೇಶಗೊಂಡಿದೆ. ಆಡುವ ಭಾಷೆಯಲ್ಲಿ ಕಕಾರಾದಿ ಕ್ಷಾಂತವಾದ ವ್ಯಂಜನಗಳೂ ಸೇರಿ 52 ವರ್ಣಗಳು. ಶುದ್ಧಗೇಯಕ್ಕೆ ಎಂದರೆ ರಾಗಾಲಾಪನೆಗೆ ಆಡುವ ಭಾಷೆಯ ವ್ಯಂಜನಗಳು ಅಗತ್ಯವಿಲ್ಲದಿದ್ದರೂ ತ–ರ–ನ, ತ–ದ–ನ–ಮ್, ಇಂತಹ ವರ್ಣಗಳನ್ನು ಜೋಡಿಸಿಕೊಂಡು ರಾಗಾಲಾಪನೆ ಮಾಡುವುದು ರೂಢಿ. ಆಡುಭಾಷೆಯ ವ್ಯಂಜನವರ್ಣಗಳ ಸಹಾಯವಿಲ್ಲದೆ ರಾಗಾಲಾಪನೆ ಮಾಡಲಾಗುವುದಿಲ್ಲ ಎಂದಲ್ಲ. ಹಿಂದೂಸ್ತಾನಿ ಗಾಯನ ಪದ್ಧತಿಯಲ್ಲಿ 'ಅ'ಕಾರ ಪ್ರಯೋಗ ಪ್ರಮುಖವಾಗಿರುವುದನ್ನು ಗಮನಿಸಬಹುದು. ಅಂತೂ ಭಾಷೆಯ ಅ–ಇ–ಉ ಕಾರಗಳ ಸಹಾಯವಿಲ್ಲದೆ ರಾಗಾಲಾಪನೆ ಕೂಡ ಸಾಧ್ಯವಿಲ್ಲ! ವ್ಯಂಜನ ಸಂಯೋಗದಿಂದ ರಂಜನಗುಣ ಹೆಚ್ಚುತ್ತದೆ; ಶ್ರಮವೂ ಕಡಿಮೆ. ಸಂಗೀತ ಸಾಹಿತ್ಯಗಳ ಎಂದರೆ ಭಾಷೆಯ ಸಂಬಂಧ ಇಲ್ಲಿಯೇ ಮೊದಲಾಗುತ್ತದೆ ಎಂದು ಹೇಳಬಹುದು. ಈ ನಾದೋತ್ಪತ್ತಿಯ ವಿಕಾಸಕ್ರಮವನ್ನೂ ನಾದೋಪಾಸನೆಯಲ್ಲಿ ಅದು ಹೇಗೆ ಪರ್ಯವಸಾನ ಹೊಂದುತ್ತದೆ ಎಂಬುದನ್ನೂ ಶ್ರೀ

ತ್ಯಾಗರಾಜರು "ಶೋಭಿಲ್ಲು ಸಪ್ತಸ್ವರ" ಎಂಬ ಅನ್ಯಾದೃಶವಾದ ಕೃತಿಯಲ್ಲಿ ನಿರೂಪಣೆ ಮಾಡಿದ್ದಾರೆ.

ಸಂಗೀತ ಸಾಹಿತ್ಯಗಳ ನಿಕಟಬಾಂಧವ್ಯವನ್ನು ಬಹುವಿಧಗಳಲ್ಲಿ ವಿವರಿಸಬಹುದು. ಈ ಬಾಂಧವ್ಯವನ್ನು ಪ್ರಾಚೀನರು ಸರಸ್ವತೀ ದೇವಿಯ ಮೂರ್ತಿಕಲ್ಪನೆಯಲ್ಲಿಯೂ, ಅವಳ ವರ್ಣನೆಗಳಲ್ಲಿಯೂ ಸುಂದರವಾದ ಕಲ್ಪನೆಯ ಮೂಲಕ ಸಂಕೇತಿಸಿದ್ದಾರೆ. ಸರಸ್ವತಿಯ ಧವಳವರ್ಣವನ್ನು ವೈದಿಕ ಮತಾನುಯಾಯಿಗಳು "ಯಾ ಕುಂದೇಂದು ತುಷಾರ ಹಾರ ಧವಳಾ, ಯಾ ಶುಭ್ರ ವಸ್ತ್ರಾನ್ವಿತಾ," "ಯಾ ಶ್ವೇತ ಪದ್ಮಾಸನಾ" ಎಂಬ ಧ್ಯಾನಶ್ಲೋಕದ ಮಾತುಗಳಲ್ಲಿ ಸ್ಪಷ್ಟಪಡಿಸಿದ್ದಾರೆ. ಸರಸ್ವತಿ ಸೃಷ್ಟಿಕರ್ತನಾದ ಚತುರ್ಮುಖ ಬ್ರಹ್ಮನ ಮಗಳು ಮತ್ತು ಅವನ ಪತ್ನಿ ಎಂಬ ನಮ್ಮ ಪೂರ್ವಿಕರ ಕಲ್ಪನೆಯಲ್ಲಿ ಸೃಷ್ಟಿಸರ್ವಸ್ವವೂ ನಾದಬ್ರಹ್ಮನ ಪರಿಣಾಮರೂಪ ಎಂಬ ವೈಜ್ಞಾನಿಕ ಸತ್ಯ ಅಡಗಿದೆ. ಆಧುನಿಕ ಭೌತವಿಜ್ಞಾನಗಳು ಪ್ರತಿಪಾದಿಸುವ ವಿಶ್ವಸೃಷ್ಟಿಮೂಲದ 'ಸ್ಫೋಟಸಿದ್ಧಾಂತ'ದಲ್ಲಿ (The Bang Theory) ಆ ವೈಜ್ಞಾನಿಕ ಸತ್ಯವನ್ನು ಗುರುತಿಸಬಹುದು.

ಹೇಗೂ, 'ಸಂಗೀತ ಸಾಹಿತ್ಯಗಳ ಅಭಿಮಾನಿ ದೇವತೆ' 'ವಾಣಿ', 'ಬ್ರಹ್ಮನ ರಾಣಿ', 'ನಾದಸ್ವರೂಪಿಣಿ', 'ವೀಣಾಪುಸ್ತಕಪಾಣಿ' ಎಂಬ ವರ್ಣನೆಯಲ್ಲಿ ಸಾಹಿತ್ಯ ಸಂಗೀತಗಳ ಅವಿನಾಭಾವ ಮೂರ್ತಿಮತ್ತಾಗಿದೆ. ಸರಸ್ವತಿ ಬ್ರಹ್ಮನ ಮುಖದಿಂದ ಹುಟ್ಟಿದವಳು, ಧವಳವರ್ಣೆ ಎನ್ನುವ ದಾರ್ಶನಿಕ ದೃಷ್ಟಿ ಆಚಾರ್ಯ ದಂಡಿಯ ಶ್ಲೋಕದಲ್ಲಿ ಸ್ಫುಟವಾಗಿದೆ:

> ಚತುರ್ಮುಖಮುಖಾಂಭೋಜವನಹಂಸವಧೂರ್ಮಮ ।
> ಮಾನಸೇ ರಮತಾಂ ನಿತ್ಯಂ ಸರ್ವಶುಕ್ಲಾ ಸರಸ್ವತೀ ॥

ಸರಸ್ವತೀದೇವಿ ಕೇವಲ ವಾಣಿ, ಹೆಣ್ಣಲ್ಲ ಎಂಬ ಜೈನಕಲ್ಪನೆಯೂ ಯಥಾರ್ಥವಾದುದು. ಕನ್ನಡದ ಆದಿಕವಿಯಾದ ಪಂಪನು, "ಪರಮ ಜಿನೇಂದ್ರವಾಣಿಯೆ ಸರಸ್ವತಿ, ಬೇರದು ಪೆಣ್ಣರೂಪಮಂ ಧರಿಯಿಸಿ ನಿಂದುದಲ್ತು" ಎಂದಿರುವುದು ದಂಡಿಯ ಶ್ಲೋಕದ ಆಶಯವನ್ನೇ ಬೇರೆಯ ಮಾತುಗಳಲ್ಲಿ ಹೇಳಿದುದಾಗಿದೆ. ಜೈನ, ವೈದಿಕ ಸಂಪ್ರದಾಯಗಳ ವೈಯಾಕರಣರು ಕೂಡ ಶಬ್ದದ್ರವ್ಯ ಎಂದರೆ ನಾದವು ಶ್ವೇತವರ್ಣೀಯ ಎಂದು ಹೇಳಿರುವುದು ಗಮನಾರ್ಹ. ವಿಭಜನೆ ಮಾಡಿದಾಗ ಸೂರ್ಯರಶ್ಮಿ ಹೇಗೆ ಸಪ್ತವರ್ಣಗಳಾಗಿ ಒಡೆಯುವುದೋ ಹಾಗೆಯೇ ಸಂಗೀತ ಸಾಹಿತ್ಯಗಳ ಮೂಲದ್ರವ್ಯವಾದ ಶ್ವೇತವರ್ಣದ ನಾದವು ಸಪ್ತಸ್ವರಗಳಾಗಿ ವಿಘಟನೆಗೊಳ್ಳುತ್ತದೆ.

ಈವರೆಗಿನ ವಿಚಾರವಿಮರ್ಶೆಯೆಲ್ಲವೂ ಸಂಗೀತ – ಸಾಹಿತ್ಯಗಳು ಜನ್ಮತಃ, ಸ್ವರೂಪತಃ, ಏಕಾತ್ಮಕವಾದುದು ಎನ್ನುವುದನ್ನು ಒತ್ತಿ ಹೇಳುವುದಕ್ಕಾಗಿ. ಸರಸ್ವತೀ

ದೇವಿ ಭವ್ಯ ಮನೋಹರ ರೂಪಗಳನ್ನು ಧರಿಸಿ ಸಂಗೀತ ಸಾಹಿತ್ಯ ಕಲಾವಿದರ ನಾಲಗೆಯ ಮೇಲೂ, ಸಂಗೀತ ಸಾಹಿತ್ಯ ಕಲಾರಸಿಕರ ಹೃದ್ರಂಗದಲ್ಲೂ ನರ್ತಿಸಿ ನಲಿಯುತ್ತಾಳೆ; ರಸಿಕ ಲೋಕವನ್ನು ನಲಿಸುತ್ತಾಳೆ.

ರಸಪ್ರತೀತಿಯನ್ನುಂಟುಮಾಡುವ ಸಾಮರ್ಥ್ಯವು ಸಾಹಿತ್ಯ-ಸಂಗೀತ ಕಲೆಗಳೆರಡಕ್ಕೂ ಸಮಾನವಾಗಿದೆ. ಎರಡರ ಗುರಿಯೂ ರಸಾನಂದವನ್ನು ಉಂಟುಮಾಡುವುದಾಗಿದೆ. ಸಾಹಿತ್ಯದಲ್ಲಿ ನವರಸಗಳ ಜೊತೆಗೆ ಭಕ್ತಿರಸಕ್ಕೂ ಸ್ಥಾನವನ್ನು ಕೊಟ್ಟಿದ್ದಾರೆ, ಕೆಲವು ಲಾಕ್ಷಣಿಕರು. ಕರ್ಣಾಟಕ ಸಂಗೀತ ಪರಂಪರೆಯಲ್ಲಿ ಭಕ್ತಿರಸಕ್ಕೆ ಪ್ರಾಧಾನ್ಯ; ಕರ್ಣಾಟಕದ ವಾಗ್ಗೇಯಕಾರರೆಲ್ಲರೂ ಭಕ್ತಶಿರೋಮಣಿಗಳು; ಪರಮ ಭಾಗವತರು. ಹೀಗೆ ಭಕ್ತಿರಸಕ್ಕೆ ಪ್ರಾಧಾನ್ಯವಿದ್ದರೂ ಸಂಗೀತದ ರಾಗಗಳು ವಿವಿಧ ರಸಗಳನ್ನು ಪ್ರತೀತಿಗೆ ತರುವ ಶಕ್ಯತೆಯನ್ನು ಹೊಂದಿವೆ. ಪ್ರಾಚೀನ ಸಂಗೀತ ಶಾಸ್ತ್ರಗ್ರಂಥಗಳಲ್ಲಿ ಬೇರೆ ಬೇರೆ ರಾಗಗಳು ಯಾವ ಯಾವ ರಸಗಳಿಗೆ ವಿನಿಯೋಗವಾಗುತ್ತವೆ ಎನ್ನುವುದನ್ನು ವಿವರಿಸಿದೆ.*

ಸಂಗೀತ ಸಾಹಿತ್ಯಗಳ ಅನ್ಯೋನ್ಯತೆ ಹೀಗಿರುವಾಗ, ಪದ್ಯಕಾವ್ಯವು ಸಂಗೀತವನ್ನು ಬೇಡ ಎನ್ನುವುದಾಗಲಿ, ಶುದ್ಧಗೇಯವು ಭಾಷೆಯ ಎಂದರೆ ಸಾಹಿತ್ಯದ ಹಂಗನ್ನು ತೊರೆದುಕೊಳ್ಳುವುದಾಗಲಿ ಅವ್ಯವಹಾರ್ಯ. ಕನ್ನಡದ ನವ್ಯಕವಿಗಳು ಎನಿಸಿಕೊಂಡವರು ಕಾವ್ಯಕ್ಕೂ ಸಂಗೀತಕ್ಕೂ ಇರುವ ಸಂಬಂಧವನ್ನು ಬೇರ್ಪಡಿಸಲು ಪ್ರಯತ್ನಪಟ್ಟರು. ಸಂಗೀತ ರಾಗಗಳನ್ನು ಅವರು ದೂರಮಾಡಬಹುದು. ಆದರೆ 'ಶಬ್ದ ಸಂಗೀತ' (Word music) ವನ್ನು ಯಾರೂ ದೂರ ಮಾಡಲಾರರು. ಕೆಲವರ ಮಾತುಗಾರಿಕೆ ಸಂಗೀತದಷ್ಟೇ ಆಪ್ಯಾಯಮಾನ. ನಲ್ಲೆಯ ಇನಿವಾತು ನಲ್ಲನ ಕಿವಿಗೆ ಸಂಗೀತ. ಮಕ್ಕಳ ಮುದ್ದು ಮಾತಿನಲ್ಲಿ ಸಂಗೀತವಿಲ್ಲವೆ? 'ಮಕ್ಕಳ ತೊದಲು ನುಡಿಗಳನ್ನು ಕೇಳದವರು ಕೊಳಲು ಇಂಪು ಎನ್ನುವರು' ಎಂದು ತಮಿಳಿನ ಕುರಳ್ ಗ್ರಂಥದಲ್ಲಿ ಹೇಳಿದೆ. ರಾಗಜ್ಞಾನ, ಶಾಸ್ತ್ರ ಸಂಸ್ಕಾರಗಳು ಇಲ್ಲದ ಜಾನಪದರು ಹಾಡಿದ, ಹಾಡುವ, ಹಾಡುಗಳಲ್ಲಿ ಶಾಸ್ತ್ರೀಯ ಸಂಗೀತದ ಹಲವಾರು ರಾಗಗಳನ್ನು ಗುರುತಿಸಬಹುದು. ಕನ್ನಡ ಸಾಹಿತ್ಯದ ತ್ರಿಪದಿ ಷಟ್ಪದಿ ಕಾವ್ಯಗಳು, ದೇಸೀ ಛಂದಸ್ಸಿನ ಕಾವ್ಯಗಳು ವರ್ಣಕ ಅಥವಾ ಹಾಡುಗಬ್ಬಗಳೆಂದೇ ಪ್ರಖ್ಯಾತವಾಗಿವೆ. ಇಲ್ಲಿ 'ಹಾಡುವುದು' ಎಂದರೆ ಇಬ್ಬಗೆ: ಒಂದು ತಾಳ ರಾಗ ಸಮನ್ವಿತವಾದ

---

* ವಿಭಾವ ಅನುಭಾವ ಸಂಚಾರಿಭಾವಗಳ ಸಂಯೋಗದಿಂದ ರಸನಿಷ್ಪತ್ತಿ ಎಂಬುದು ಎಲ್ಲ ಕಾವ್ಯವಿಮರ್ಶಕರಿಂದ ಒಪ್ಪಿತವಾದ ಭಾರತಮತ. ನಾಟ್ಯಕ್ಕೂ ಕಾವ್ಯಕ್ಕೂ ಸಮಾನವಾಗಿ ಅನ್ವಯಿಸುವ ಈ ಸಿದ್ಧಾಂತ "ಮಾತು" ಇಲ್ಲದ, ಕೇವಲ "ಧಾತು" ಪ್ರಧಾನವಾದ, ವಿಭಾವಾದಿಗಳ ಸ್ಪರ್ಶಲೇಶವೂ ಇಲ್ಲದ ಶುದ್ಧಗೇಯದಲ್ಲಿ (ಎಂದರೆ ರಾಗಾಲಾಪನೆಯಲ್ಲಿ) ಹೇಗೆ ಸಮನ್ವಿತವಾಗುತ್ತದೆ, ರಸಪ್ರತೀತಿ ಹೇಗೆ ಆಗುತ್ತದೆ ಎನ್ನುವುದು ಬೇರೆಯ ಪ್ರಶ್ನೆ; ಪರಿಶೀಲನಾರ್ಹ.

ಹಾಡಿಕೆ; ಕರ್ನಾಟಕ ಸಂಗೀತ ಸಂಪ್ರದಾಯಕ್ಕೆ ಕಾರಣಭೂತವಾದದ್ದು. ನಿಜಗುಣ ಶಿವಯೋಗಿಗಳು ಮತ್ತು ಪುರಂದರದಾಸರ ಕಾಲದಲ್ಲಿ ಈ ಸಂಪ್ರದಾಯ ಒಂದು ಸ್ಪಷ್ಟ ರೂಪವನ್ನು ಪಡೆಯಿತು. ಇವರಿಗೂ ಹಿಂದೆ ಶ್ರೀಪಾದರಾಜರು ಪದಗಳನ್ನು ರಚಿಸಿದ್ದಾರೆ. ಇನ್ನೊಂದು ಬಗೆಯ ಹಾಡಿಕೆ ಗಮಕ ಎಂದು ಪ್ರಸಿದ್ಧ. ಈ ಗಮಕ ಕಲೆ ಕನ್ನಡನಾಡಿನಲ್ಲಿ ಒಂದು ವಿಶಿಷ್ಟ ಕಲೆಯಾಗಿ ಬೆಳೆಯಿತು. ಕರ್ನಾಟಕದ ರಾಜಾಸ್ಥಾನಗಳಲ್ಲಿ ಕವಿ, ಗಮಕಿ, ವಾದಿ, ವಾಗ್ಮಿಗಳಿಗೆ ಒಂದು ಮನ್ನಣೆಯ ಸ್ಥಾನವಿತ್ತು. ಶಾಸ್ತ್ರೀಯವಾದ ಸಂಗೀತವು ಕನ್ನಡನಾಡಿನಲ್ಲಿ ಬಹಳ ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿತ್ತು ಎನ್ನುವುದಕ್ಕೆ ಕಾವ್ಯಗಳಲ್ಲಿ ನೂರಾರು ಉಲ್ಲೇಖಗಳಿವೆ. ಸುಮಾರು 10ನೆಯ ಶತಮಾನದ ಶಾಸನವೊಂದರಲ್ಲಿ 'ಬತ್ತೀಸ' ಎಂದರೆ 32 ರಾಗಗಳ ಪ್ರಸ್ತಾವವಿದೆ ಎಂದು ತಿಳಿದುಬರುತ್ತದೆ. ಶ್ರೀ ಬಸವೇಶ್ವರರು ತಮ್ಮ ವಚನವೊಂದರಲ್ಲಿ ತಾವು ಬತ್ತೀಸ ರಾಗಗಳನ್ನು ಅರಿಯರೆಂದೂ ತಮಗೆ ತಾಳಮಾನ ಗೊತ್ತಿಲ್ಲವೆಂದೂ, ತಾವು ಒಲಿದಂತೆ ಹಾಡುವುದಾಗಿಯೂ ಹೇಳಿಕೊಂಡಿದ್ದಾರೆ. ಎಂದಮೇಲೆ ರಾಗ ತಾಳ ಸಹಿತವಾಗಿ ಹಾಡುವುದಕ್ಕೆ ಅರ್ಹವಾದ ಕೃತಿಗಳು ಆಗ ಪ್ರಚಾರದಲ್ಲಿ ಇದ್ದಿರಬೇಕು ಎಂದಾಯಿತು. ನಿಜಗುಣ ಶಿವಯೋಗಿಗಳು ತಮ್ಮ 'ವಿವೇಕ ಚಿಂತಾಮಣಿ'ಯಲ್ಲಿ ಬತ್ತೀಸ ರಾಗಗಳ ವಿಚಾರವಾಗಿ ಹೇಳಿದ್ದಾರೆ. ಪುರಂದರದಾಸರ ಕಾಲದಲ್ಲಿ ರಾಗ ಪ್ರಪಂಚ ವಿಸ್ತಾರವಾದಂತೆ ಕಾಣುತ್ತದೆ. ಅವರು ಸಂಗೀತಶಾಸ್ತ್ರವನ್ನು ಬಲ್ಲವರಾಗಿದ್ದರು. ಆದರೂ ಅವರ ಕೃತಿಗಳನ್ನು ರಾಗಲಕ್ಷಣಕ್ಕೆ ತ್ಯಾಗರಾಜಾದಿಗಳ ಕೃತಿಗಳನ್ನು ಲಕ್ಷ್ಯಗಳಾಗಿ ಸ್ವೀಕರಿಸುವಂತೆ ಲಕ್ಷ್ಯಗಳಾಗಿ ಸ್ವೀಕರಿಸಲು ಸಾಧ್ಯವಿಲ್ಲ ಎನ್ನುವ ಅಭಿಪ್ರಾಯವಿದೆ. ಬಸವಣ್ಣನವರಂತೆ ಅವರು ಭಕ್ತಿಗೆ, ಸಮಾಜ ಸಂಸ್ಕರಣಕ್ಕೆ ಪ್ರಾಧಾನ್ಯಕೊಟ್ಟು ಸಮಯಸ್ಫೂರ್ತಿಯಿಂದ ಕೃತಿರಚನೆ ಮಾಡಿದರು. ನಿಂತಲ್ಲಿ, ಕುಳಿತಲ್ಲಿ, ಕಂಡಕಂಡಲ್ಲಿ ಆಗಿಂದಾಗ್ಗೆ ಎದುರಿಸುತ್ತಿದ್ದ, ಎದುರಿಸಬೇಕಾಗಿ ಬಂದ ಬದುಕಿನ ನಾನಾ ವಿಧದ ಸನ್ನಿವೇಶಗಳಲ್ಲಿ ಭಾವೋದ್ವಿಗ್ನರಾಗಿ ಹಾಡಿದರು. ದಾಸರು ನಾದೋಪಾಸಕರಾಗಿರಲಿಲ್ಲ; ಭಕ್ತಿ ಸಾಧಕರು. ದಾಸರ ರಚನೆಗಳಲ್ಲಿ ಸಾಹಿತ್ಯ ಅಥವಾ 'ಮಾತು' ಅರ್ಥಾತ್ ಭಾವಪೂರ್ಣವಾದ 'ಮಾತು', ಮೇಲುಗೈ. ಧಾತುವಿಗೆ ಅಥವಾ ರಾಗಭಾವಕ್ಕೆ ಅವರು ಪ್ರಾಧಾನ್ಯ ಕೊಟ್ಟಂತೆ ಕಾಣುವುದಿಲ್ಲ. ಇಷ್ಟರ ಮೇಲೆ ದಾಸರು ಯಾವ ರೀತಿ ಹಾಡಿಕೊಂಡು ಕೃತಿರಚನೆ ಮಾಡಿದರು ಎನ್ನುವುದಕ್ಕೆ ಲಿಖಿತ ಪ್ರಮಾಣವಾಗಲೀ ಅನ್ಯ ಪ್ರಮಾಣವಾಗಲೀ ಇಲ್ಲ. ತ್ಯಾಗರಾಜರು ಕೂಡ ತಮ್ಮ ಕೃತಿಗಳ ಧಾತುಸ್ವರೂಪವನ್ನು ಸ್ವರಪ್ರಸ್ತಾರರೂಪದಲ್ಲಿ ಬರೆದಿಡಲಿಲ್ಲ. ತ್ಯಾಗರಾಜರ ಹಾಡಿಕೆಯ ಬಾನಿ (ಬಾಣಿ <ವಾಣಿ) ಅವರ ಸಂಗೀತ ಶಿಷ್ಯರಿಂದ ಪರಂಪರಾಗತವಾಗಿ ಸಾಗಿ ಬಂದು ಲಿಖಿತ ರೂಪವನ್ನು ಪಡೆಯಿತು. ತ್ಯಾಗರಾಜರು ಪುರಂದರದಾಸರ ಅಭಿಮಾನಿಗಳು, ಭಕ್ತರು. ತ್ಯಾಗರಾಜರ ಅನೇಕ ಕೃತಿಗಳಿಗೆ ದಾಸರ ಕೃತಿಗಳು ಮೂಲ ಮಾದರಿಗಳಾಗಿರುವಂತೆ ಕಂಡುಬರುತ್ತದೆ.

ಈ ದಿಶೆಯಲ್ಲಿ ಅಧ್ಯಯನ, ಸಂಶೋಧನೆಗಳು ನೆಡೆದರೆ ಪುರಂದರ ದಾಸರ ಅನೇಕ ಕೃತಿಗಳಿಗೆ ಶಾಸ್ತ್ರಮರ್ಯಾದೆಗೆ ಅನುಗುಣವಾದ ಧಾತುವಿನ ಮಾತೃಕೆಯನ್ನು ಗುರುತಿಸಬಹುದೆಂದು ಕಾಣುತ್ತದೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪುರಂದರ ದಾಸರಿಗೆ ಒಂದು ಗಣ್ಯಸ್ಥಾನವಿದೆ. ತ್ಯಾಗರಾಜರಿಗೆ ಆಂಧ್ರ ಸಾಹಿತ್ಯ ಚರಿತ್ರೆಯಲ್ಲಿ ಯಾವ ಸ್ಥಾನವಿದೆಯೋ ನಾವು ಅರಿಯೆವು. ಪುರಂದರದಾಸರ ಕೃತಿಗಳಿಗೆ ಇರುವ ಸಾಹಿತ್ಯಕ ಮೌಲ್ಯ ತ್ಯಾಗರಾಜರ ಕೃತಿಗಳಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ ಎಂಬ ಅಭಿಪ್ರಾಯವಿದೆ. ತ್ಯಾಗರಾಜರ ಕೃತಿಗಳಲ್ಲಿರುವ ಧಾತುಕಮೌಲ್ಯ ದಾಸರ ಕೃತಿಗಳಲ್ಲಿ ಖಂಡಿತ ಇಲ್ಲ. ಹೀಗೆಂದಮಾತ್ರಕ್ಕೆ ಧಾತುಕಮೌಲ್ಯವನ್ನು ನೀಡಿ ದಾಸರ ಕೃತಿಗಳನ್ನು–ಹಲಕೆಲವನ್ನಾದರೂ–ಹಾಡಲಾಗುವುದೇ ಇಲ್ಲ ಎಂದು ಅರ್ಥವಲ್ಲ. ಎಲ್ಲ ಕೃತಿಗಳನ್ನೂ ಹಾಗೆ ಹಾಡಬೇಕಾಗಿಯೂ ಇಲ್ಲ. ಈಚೆಗೆ ಚಲನಚಿತ್ರಗಳಲ್ಲಿ ಹಾಡುವವರೂ ಇತರರೂ ಆಕಾಶವಾಣಿ ಕೇಂದ್ರಗಳಲ್ಲಿ ಹಾಡುವ ಕಲಾವಿದರೂ ದಾಸರ ಪದಗಳನ್ನು ಬಗೆಬಗೆಯ ಧಾಟಿಗಳಲ್ಲಿ ಹಾಡುತ್ತಿದ್ದಾರೆ. ಈಗಲೂ ಉಂಛವೃತ್ತಿ ಮಾಡುವ ಪ್ರಾಚೀನ ಸಂಪ್ರದಾಯದ ದಾಸರು ವೃದ್ಧಾಪ್ಯ ದೆಸೆಯಲ್ಲಿದ್ದರೂ ದಾಸರ ಪದಗಳನ್ನು ಹಾಡುವವರು ಇದ್ದಾರೆ. ಅವರನ್ನು ಅರಸಿ, ಆರಿಸಿ, ಹಾಡಿಸಿ ಧ್ವನಿಮುದ್ರಿಸಿ (ಟೇಪ್ ರಿಕಾರ್ಡರ್‌ಗಳಲ್ಲಿ) ದಾಸರ ಹಲಕೆಲವು ಕೃತಿಗಳ ಮೂಲಧಾತು ಸ್ವರೂಪವನ್ನು ಅಂಥವರು ಕಣ್ಮರೆಯಾಗುವುದಕ್ಕೆ ಮುಂಚೆ ಕಂಡುಹಿಡಿಯುವ ಪ್ರಯತ್ನ ಮಾಡಬೇಕು. ಈ ಕಾರ್ಯವನ್ನು ಸಂಗೀತ ನಾಟಕ ಅಕಡೆಮಿಯಂಥ ಸಂಸ್ಥೆಗಳು ಮಾಡಬೇಕು.

ಕಚೇರಿಯ ಸಂಗೀತದ ಹಾಡಿಕೆಯಲ್ಲಿ ಧಾತುವಿಗೂ ಮಾತುವಿಗೂ ಸಮ ಪ್ರಾಧಾನ್ಯವಿರಬೇಕೆಂದು ಒತ್ತಿ ಹೇಳುವುದಕ್ಕಾಗಿ ಈವರೆಗೆ ಸಾಹಿತ್ಯ–ಸಂಗೀತಗಳ ಬಾಂಧವ್ಯವನ್ನು ಕುರಿತು ಸ್ವಲ್ಪ ವಿಸ್ತಾರವಾಗಿಯೇ ಹೇಳಬೇಕಾಯಿತು. ಸಂಗೀತ ಜ್ಞಾನವಿಲ್ಲದವರು ಗಿಳಿಪಾಠ ಮಾಡಿ ರಾಗಗಳ ಛಾಯೆಯನ್ನು ಹಿಡಿದು ಕಾವ್ಯವಾಚನ ಮಾಡುವ ಸಂದರ್ಭದಲ್ಲಿ ಸಂಗೀತಕ್ಕೆ ಅಪಚಾರ ಮಾಡುವುದು ಹೇಗೆ ಸಲ್ಲದೋ ಹಾಗೆಯೇ ಸಾಹಿತ್ಯಕ್ಕೂ ಪ್ರಾಶಸ್ತ್ಯವನ್ನು ಕೊಟ್ಟು ಕೃತಿರಚನೆ ಮಾಡಿರುವ ತ್ಯಾಗರಾಜಾದಿಗಳ ಕೃತಿಗಳನ್ನು ಗಾನ ಮಾಡುವಾಗ ಸಾಹಿತ್ಯಕ್ಕೆ ಅಪಚಾರ ಮಾಡುವುದೂ ಸಲ್ಲದು. ಈಚಿನ ಸಂಗೀತ ಕಚೇರಿಗಳಲ್ಲಿ ಸ್ವರ ಸಂಗತಿಗಳ ಗಣಿತದ ಲೆಕ್ಕಾಚಾರಗಳ ಅದ್ಭುತ ಪ್ರದರ್ಶನದ ಕಡೆಗೆ ಒಂದು ಪ್ರವೃತ್ತಿ ಪ್ರಬಲವಾಗುತ್ತಿರುವಂತಿದೆ. ಇದು ಹೋಗಬೇಕು. ರಾಗಾಲಾಪನೆಗೂ ಭಾವಪೂರ್ಣವಾದ ಹಾಡಿಕೆಗೂ ಪ್ರಾಧಾನ್ಯ ಸಲ್ಲಬೇಕು. ಗಾಯನಪ್ರತಿಭೆಯ ವಿಲಾಸದ ಸೂಕ್ಷ್ಮಾಂಶಗಳನ್ನು ರಾಗಾಲಾಪನೆಯಲ್ಲಿ ಪ್ರದರ್ಶನ ಮಾಡಿ, ಸಂಗೀತ ಕೃತಿಯನ್ನು ಹಾಡುವಾಗ ಸಾಹಿತ್ಯಭಾವ ರಾಗ ಭಾವಗಳ ಪರಸ್ಪರ ಪ್ರಭಾವದಿಂದ ಕೃತಿಯ ರಸೋಲ್ಲಾಸ ಇಮ್ಮಡಿಯಾಗುವಂತೆ ಹಾಡುವ ಕಲೆ ಪ್ರಚಾರಕ್ಕೆ ಬರಬೇಕು. ಹೀಗೆ ಹಾಡುವವರು ಇಲ್ಲವೆಂದಲ್ಲ; ವಿರಳ.

ತಾತ್ತ್ವಿಕವಾಗಿ ನೋಡಿದರೆ, ಸಂಗೀತಕ್ಕೆ ಭಾಷೆ ಎಂದರೆ ಮಾತು ಅಷ್ಟು ಮುಖ್ಯವಲ್ಲ, ದಿಟ. ಆದರೆ, ನಮ್ಮ ಸಂಗೀತ ಕೃತಿಕಾರರು ವಿಶೇಷವಾಗಿ ಅರ್ಥಪೂರ್ಣವಾದ ರಸಪ್ರತೀತಿಗೆ ಇಂಬು ಕೊಡುವ ಭಾವಪೂರ್ಣವಾದ ಮಾತುಗಳನ್ನು ಬಳಸಿರುವುದರಿಂದ, ಹಾಡಿನ ಭಾಷೆಯ ಅರ್ಥ ಭಾವಗಳು ಶ್ರೋತೃಗಳಿಗೆ ಅನೂನವಾಗಿ ತಲಪುವಂತಿರಬೇಕು. ನಮ್ಮ ಕನ್ನಡ ನಾಡಿನ ಕಚೇರಿಗಳಲ್ಲಿ ಅನ್ಯಭಾಷೆಗಳ ಕೃತಿಗಳಿಗೆ ಸಿಂಹಪಾಲು. ಪಂಚಭಕ್ಷ್ಯ ಪರಮಾನ್ನಗಳ ಸಂತರ್ಪಣೆಯ ಕೊನೆಯಲ್ಲಿ ನೀರು ಮಜ್ಜಿಗೆ ಬಡಿಸಿದ ಹಾಗೆ ಒಂದು ದಾಸರ ಪದವನ್ನು ಹಾಡಿ ಕಚೇರಿಯನ್ನು ಮುಕ್ತಾಯ ಮಾಡುವುದು ವಾಡಿಕೆ. ತಮಿಳು ತೆಲುಗು ದೇಶಗಳಲ್ಲಿ ಹಾಗೆ ಮಾಡಿಕೊಳ್ಳಲಿ, ಅಲ್ಲಿ ಅದು ಉಚಿತವಾದೀತು. ಕರ್ಣಾಟಕದಲ್ಲಿ, ಅದರಲ್ಲಿಯೂ ಈಗಿನ ಸನ್ನಿವೇಶದಲ್ಲಿ, ಎಲ್ಲ ಕ್ಷೇತ್ರಗಳಲ್ಲಿಯೂ ಕನ್ನಡಕ್ಕೆ ಅಗ್ರಸ್ಥಾನ ಸಲ್ಲಬೇಕು ಎನ್ನುವ ಸಹಜವಾದ ಅಪೇಕ್ಷೆ ಚಳವಳಿಯ ರೂಪವನ್ನು ತಾಳುತ್ತಿರುವ ಸನ್ನಿವೇಶದಲ್ಲಿ, ಕನ್ನಡ ಕೃತಿಗಳಿಗೆ ಸಿಂಹಪಾಲನ್ನು ಅಲ್ಲದಿದ್ದರೂ ಸಮಪಾಲನ್ನಾದರೂ ಕೊಡದಿದ್ದರೆ ಶಾಸ್ತ್ರೀಯ ಸಂಗೀತಕ್ಕೆ ಇಲ್ಲಿ ಆಳಿಗಾಲ ಬಂದೀತೋ ಏನೋ ಎನ್ನುವ ಶಂಕೆ ಮೂಡುತ್ತದೆ. ಜನಸಾಮಾನ್ಯಕ್ಕೂ ಶಾಸ್ತ್ರೀಯ ಸಂಗೀತದಲ್ಲಿ ಆಸಕ್ತಿ ಹುಟ್ಟುವಂತೆ ಮಾಡಬೇಕಿದ್ದರೆ ಇಲ್ಲಿನ ಮತ್ತು ಹೊರಗಿನ ಸಂಗೀತಕ್ಕೂ ಉಚಿತ ಸ್ಥಾನವನ್ನು ಕಲ್ಪಿಸಬೇಕು. ನಾಡಿನಲ್ಲಿ ಶಾಸ್ತ್ರೀಯ ಸಂಗೀತದ ವಾತಾವರಣ ಬಲವಾದರೆ ಒಬ್ಬ ಆಧುನಿಕ ಕನ್ನಡ ತ್ಯಾಗರಾಜ ಜನ್ಮತಾಳಿಯಾನು. ಈ ಶುಭೋದಯವನ್ನು ನಾವು ಬರಮಾಡಿಕೊಳ್ಳಬೇಕು–ಪ್ರಯತ್ನಶೀಲರಾಗಿ. 

# ಗ್ರಂಥಾವಲೋಕನ

## ಇಂಗ್ಲಿಷ್ ಗೀತಗಳು

1920ರ ಸುಮಾರಿಗೆ ಬಿ.ಎಂ.ಶ್ರೀ. ಯವರು ಪಾಲ್‌ಗ್ರೇವ್‌ನ 'ಗೋಲ್ಡನ್ ಟ್ರೆಷರಿ'ಯಿಂದ ಆರಿಸಿದ ಕೆಲವು ಕವನಗಳನ್ನು ರೂಪಾಂತರಿಸಿ "ಇಂಗ್ಲಿಷ್ ಗೀತಗಳು" ಎನ್ನುವ ಹೆಸರಿನಲ್ಲಿ ಪ್ರಕಟಿಸಿದರು. ಇಂಗ್ಲಿಷ್ ಭಾವಗೀತೆಯ ಪದ್ಯಬಂಧಗಳು, ಪ್ರಾಸವಿನ್ಯಾಸ, ಆಡುಮಾತಿನ ಗತ್ತನ್ನು ಹೆಚ್ಚಾಗಿ ಕನ್ನಡ ಮಾತ್ರಾಗಣಗಳ ಪದ್ಧತಿಯಲ್ಲಿ ಪ್ರಯೋಗಿಸಿ, ಅವರು ಹಳೆಯ ಮೈಸೂರಿನ ಕವಿಗಳಿಗೆ ಮಾರ್ಗದರ್ಶನ ಮಾಡಿದರು. ಈಗ ಅದಾದ ಸುಮಾರು 60 ವರ್ಷಗಳ ನಂತರ, ಡಾ|| (ಬೋಗಾದಿ) ರಾಮಚಂದ್ರಶರ್ಮರು ಇಂಗ್ಲಿಷಿನ ನೂರು ಕವನಗಳನ್ನು ರೂಪಾಂತರ ಮಾಡಿದ್ದಾರೆ.

ಬಿ. ಎಂ. ಶ್ರೀ. ಯವರಿಗೆ ಮುಖ್ಯವಾದ ಎರಡು ಉದ್ದೇಶಗಳಿದ್ದವು. ಒಂದು, "ಕನ್ನಡದ ಜಾಯಮಾನವನ್ನು ಮೀರದೆ ಎಷ್ಟುಮಟ್ಟಿಗೆ ಛಂದಸ್ಸು ಇಂಗ್ಲಿಷ್ ಛಂದಸ್ಸುಗಳನ್ನು ಹೋಲಬಹುದೋ ಅಷ್ಟುಮಟ್ಟಿಗೂ ಆ ಪದ್ಯಗಳನ್ನು ಕನ್ನಡಕ್ಕೆ ಇಳಿಸುವುದಕ್ಕೆ ಪ್ರಯತ್ನ"; ಇನ್ನೊಂದು, "ವಿಶ್ವಕವಿತಾ ವಿಷಯಗಳಾದ ಯುದ್ಧ, ಪ್ರೇಮ, ಮರಣ, ದೇಶಭಕ್ತಿ, ದೈವಭಕ್ತಿ, ಪ್ರಕೃತಿಸೌಂದರ್ಯ, ಮಾನವ ಜನ್ಮದ ಸುಖದುಃಖಗಳು, ರಾಗದ್ವೇಷಗಳು, ಪುರುಷಾರ್ಥಗಳು, ಜನ್ಮಾಂತರ ದರ್ಶನಗಳು ಮುಂತಾದ ಕಾವ್ಯವಸ್ತುಗಳನ್ನು ಇತರ ದೇಶದ ಕವಿಗಳು ಯಾವ ರೀತಿಯಲ್ಲಿ ಸೃಷ್ಟಿಗೊಳಿಸಿ ಸಹಜ ಭಾಷೆಯಲ್ಲಿ ಸೌಂದರ್ಯರಚನೆಯನ್ನು ಮಾಡಿರುವರೋ ಅವನ್ನೆಲ್ಲ ಶ್ರದ್ಧೆಯಿಂದ ಪರಾಮರ್ಶಿಸಿ, ಧೈರ್ಯವನ್ನೂ ಶಿಕ್ಷಣಬದ್ಧವಾದ ಸ್ವಾತಂತ್ರ್ಯವನ್ನೂ ವಹಿಸಿ ಕನ್ನಡ ಕವಿಗಳು ಹಿಂದಕ್ಕಿಂತಲೂ ಮುಂದೆ ಇನ್ನೂ ಶ್ರೇಯಸ್ಸನ್ನು ತಾಳಲಿ" ಎನ್ನುವುದು.

ರಾಮಚಂದ್ರಶರ್ಮರ ಉದ್ದೇಶ ಅವಕ್ಕಿಂತ ಭಿನ್ನವಾದದ್ದು: "ನನಗೇ ಹೊಳೆದು ಇವನ್ನು ನಾನು ಕನ್ನಡದಲ್ಲಿ ಬರೆದಿದ್ದರೆ ಹೇಗೆ ಬರೆಯುತ್ತಿದ್ದೆ" ಎನ್ನುವ ಪ್ರಯೋಗ. "ಎರವಲು ತಂದದ್ದರ ಮೇಲೆ ನನ್ನತನದ ಮುದ್ರೆ ಒತ್ತಿದ ಪ್ರಯತ್ನ ಇದು." ಎಲ್ಲಕ್ಕಿಂತ ಮುಖ್ಯವಾಗಿ ಶರ್ಮರು ಎತ್ತುವ ಪ್ರಶ್ನೆ: "ಇಲ್ಲಿರುವ ರೂಪಾಂತರಗಳು ಕನ್ನಡದ ಪದ್ಯಗಳಾಗಿ ನಿಲ್ಲಬಲ್ಲುವೇ ಅನ್ನುವ ಪ್ರಶ್ನೆಯೊಂದೇ ಸಮಂಜಸವಾದದ್ದು."

ಬಿ. ಎಂ. ಶ್ರೀಯವರಿಗೆ ಮಾದರಿಗಳನ್ನು ಒದಗಿಸುವ ಉದ್ದೇಶವಿದ್ದರೆ, ರಾಮಚಂದ್ರಶರ್ಮರಿಗೆ ತಮ್ಮ ಅಭಿವ್ಯಕ್ತಿಯನ್ನು ವಿಸ್ತರಿಸಿಕೊಳ್ಳುವ, ಆ ಮೂಲಕ ಕನ್ನಡ ಬಾಗುವ ಉದ್ದೇಶವಿರುವಂತೆ ಕಾಣುತ್ತದೆ. 1960ರ ಹೊತ್ತಿಗೆ ತುಂಬ ಪ್ರಸಿದ್ಧರಾಗಿದ್ದ ರಾಮಚಂದ್ರಶರ್ಮರು ಸುಮಾರು ಇಪ್ಪತ್ತು ವರ್ಷಗಳ ಕಾಲ ಪರದೇಶಿತನ

ವನ್ನು ಅನುಭವಿಸಿದವರು. ಆ ಕಾಲವಲ್ಲಿ ಆಗಾಗ ಕನ್ನಡನಾಡಿಗೆ ಬಂದುಹೋಗುತ್ತ, ಪರದೇಶವಲ್ಲಿ ಸಿಕ್ಕ ಕನ್ನಡಿಗರೊಂದಿಗೆ ತಮ್ಮ ಕನ್ನಡತನವನ್ನು ಹಂಚಿಕೊಳ್ಳುತ್ತಿದ್ದ ಶರ್ಮರು ಈ ಸಂಗ್ರಹವಲ್ಲಿ ತಮ್ಮ ಹೊರದೇಶದ ಅನುಭವಗಳನ್ನು ಕನ್ನಡದ ಮೂಲಕ ಹಂಚಿಕೊಳ್ಳುತ್ತಿದ್ದಾರೆ. ಇಲ್ಲಿ ತಮ್ಮ ಅನುಭವ ಮತ್ತು ಇನ್ನೊಬ್ಬ ಕವಿಯ ಅನುಭವ ಒಂದೇ ಆದಾಗ, ಇನ್ನೊಬ್ಬ ಕವಿ ಕನ್ನಡದಲ್ಲಿ ಶರ್ಮರ ಮೂಲಕ ತನ್ನ ಅಭಿವ್ಯಕ್ತಿಯನ್ನು ಕಂಡುಕೊಂಡರೆ ಹೇಗಿರಬಹುದು ಎನ್ನುವ ರೂಪಾಂತರ ಗಳನ್ನು ಮಾಡಿದ್ದಾರೆ. ಇವರ ರೂಪಾಂತರದ ಕಲ್ಪನೆಯನ್ನು 'ರೂಪಾಂತರ' ಎನ್ನುವ ಮುನ್ನುಡಿರೂಪವಾದ ಕವನವೇ ಹೇಳುತ್ತದೆ. ಕಂಬಳಿ ಹುಳ ಚಿಟ್ಟೆಯಾಗುವುದಕ್ಕಾ ಮುಂಚೆ ಗೂಡುಕಟ್ಟಿಕುಳಿತದ್ದು

ಎಳೆಬಿಸಿಲ ಬಂದು ಬೀಗ್ಗೆ
ಉಬ್ಬಿ ತುಸ ಪಾರದರ್ಶಕವಾದ
ಉರುಳೆಗೇಥದೋ ತುರ್ತು, ಪುನರುತ್ಥಾನಕ್ಕೆ
ಗಳಿಗೆ ಬಂದ ಸಂಭ್ರಮ.
ಗಕ್ಕನೆ ಕಂಡ ಕಾಸಿನಗಲದ ತೂತು,
ಗಾಳಿ ಮೂಸಿದ ಮೀಸೆ, ರಂಧ್ರದಂಚಿಗೆ ತಿವಿ.
ಹೆದರಿ ಒಳಕ್ಕಿಳಿದಂತೆ ಜಾರಿ ಮೇಲೇರಿ
ಮೈ ಮುದುರಿ ಕೂತ ಚಿಟ್ಟೆ.

ಇಲ್ಲಿ ಬರುವ 'ಹೆದರಿ' 'ಮೈಮುದುರಿ' ಎನ್ನುವ ಪದಗಳಲ್ಲಿ ಶರ್ಮರ ಅನುಮಾನಗಳು ಕಾಣಿಸಿದರೆ, 'ಚಿಟ್ಟೆ' ಎನ್ನುವಲ್ಲಿ ಹೊಸಹುಟ್ಟನ್ನು ಪಡೆದ ಆತ್ಮವಿಶ್ವಾಸವೂ ಕಾಣಿಸಿ ಕೊಳ್ಳುತ್ತದೆ.

ಚಿಟ್ಟೆಗಳಲ್ಲಿ ಹಲವಾರು ಥರವಿರುವಂತೆ, ಇಲ್ಲಿನ ಪದ್ಯಬಂಧಗಳಲ್ಲೂ ಹಲವಾರು ರೀತಿಗಳಿವೆ:

ನಿನ್ನ ಧ್ವನಿಯೇ ಅದು? ಹಾಗಾದರೀಗ ಎದುರಿಗೆ ಬಂದು
ನಿಲ್ಲು. ದೂರದೂರಿಗೆ ನಾನು ಬಂದಾಗ ನೀನಲ್ಲಿ
ಕಾದಲೆಯಾಗಿ ಕಾದು ನಿಲ್ಲುತ್ತಿದ್ದೆ, ನೆನಪಿದೆ. ನೀನಂದು
ಸಂಜೆಗೆ ಉಟ್ಟ ಸೀರೆಸೆರಗಿನ ಬಣ್ಣ ಗಾಳಿನೀಲಿ. (ಪುಟ ೨)

ಈ ಪದ್ಯದಲ್ಲಿ abab ಪ್ರಾಸಕ್ರಮವನ್ನೂ, ಒಂದು ಪಾತ್ರ ಮಾತಾಡುವಾಗಿನ ಅರ್ಥಯತಿಯನ್ನೂ ಬಳಸಿದ್ದಾರೆ. 'ಸೋಲು' ಎನ್ನುವ ಕವನದಲ್ಲಿ ರಾಂಡಲೆ (Roundalay) ಎನ್ನುವ ಪದ್ಯವಿನ್ಯಾಸವನ್ನು ಬಳಸಿದ್ದಾರೆ:

ನೀರಾಚೆಯ ಜನಕ್ಕೆ ನಮ್ಮ ದ್ವೀಪದ ಮೇಲೆ ಒಡೆತನ ಹೂಡುವಾಸೆ
ಮೊದಲು ಕಾಣಿಸಿಕೊಂಡ ಕೊಕ್ಕರೆಮೂತಿ ದೋಣಿ, ದಢ ಹಿಡಿದು
ಮೂಸಿ ಮರೆಯಾದದರ ಬೆನ್ನಿಗೆ ನೌಕೆ. ಭರ್ಜರಿ ಮೀಸೆ

ಹೊತ್ತಿದರ ಮುಖಂಡ ಗರ್ಜಿಸಿದ ಕೂಡಲೇ ನೀರಿಂದ ಜಿಗಿದು
ಸಾಲಾಗಿ ನಿಂತು ಕಡಲಂತೆ ಕೂಗಿದ ಪಡೆ. ವ್ಯರ್ಥ ಕದನದ ಮಾತು—
ನಾಯಕ ಸತ್ತ ಅನಾಥರು ನಾವು ಬಿಸಿಲಿನಲ್ಲೇ ಒಗೆದು

ಹೀಗೆ aba bcb cdc ded efe f ಎನ್ನುವ ಪ್ರಾಸವಿನ್ಯಾಸ ಈ ಕವನಕ್ಕಿದೆ. ಇವಲ್ಲದೆ ಶರ್ಮರು ಅರ್ಧಪ್ರಾಸ, ಸ್ವರಾಂತ್ಯಪ್ರಾಸಗಳನ್ನೂ ಪ್ರಯೋಗಿಸಿದ್ದಾರೆ. ಸ್ವಚ್ಛಂದ ಛಂದಸ್ಸನ್ನೂ ಬಳಸಿದ್ದಾರೆ. ಲೂಯಿ ಮೆಕ್‌ನೀಸನ 'ಪ್ರಾರ್ಥನೆ', ಜೇಮ್ಸ್ ರೀವ್ಸನ 'ಭಟ್ಟರ ತತ್‌ಕ್ಷಣದ ಕಾವ್ಯದ ಪುಡಿ', ರಾಯ್ ಫುಲರನ 'ಬರ್ಬರರು' ಮತ್ತು 'ನಿಲ್ದಾಣದ ಮೇಲೆ', ಆರ್. ಎಸ್. ಥಾಮಸನ 'ಕಾವ್ಯ ಮೀಮಾಂಸೆ', ಟಾಮ್‌ಗನ್ನನ 'ಕ್ರಿಸ್ತ ಮತ್ತು ಅವನ ತಾಯಿ', ಏಡ್ರಿಯನ್ ಮಿಚೆಲ್ಲನ 'ಸಂಬಂಧವಿದ್ದವರಿಗೆ' ಮೊದಲಾದ ಕವನಗಳು ನಮ್ಮ ಕಾವ್ಯಸಾಮಗ್ರಿಯ ಮಿತಿಗಳನ್ನು ಹಿಗ್ಗಿಸಿವೆ. ಜಾನ್ ಬೆಟ್‌ಮನ್ನನ 'ನಿವೇದನೆ-ಎರಡು' ನಮ್ಮ ಭಾವ ಲೋಕವನ್ನು ಹಿಗ್ಗಿಸುತ್ತದೆ:

ಮಗಳ ಮೇಲೊಮ್ಮೆ ಅಕಾರಣ ಸಿಟ್ಟು ; ಅಗವಳ
ಕಣ್ಣು ನೀರೊಡೆಸು ಕಣ್ಣೀರು ತರಲಿ. ಜೊತೆಯಲ್ಲಿ
ನಿಮ್ಮಿಬ್ಬರ ಕ್ಷಮೆ. ನನ್ನಾತ್ಮ ಛಿದ್ರವಾಗದ ಹಾಗೆ ಭದ್ರ ಹಿಡಿ,
ಒಂಟಿ ಅಲೆಯುವ ಬಿಡುಗಣ್ಣು ತಾರೆಗಳ ಮನೆಗಾವಲೇ.

ರಾಮಚಂದ್ರ ಶರ್ಮರ ಈ ಪ್ರಯೋಗ ಸ್ವಾಗತಾರ್ಹವಾದದ್ದು. ಇಲ್ಲಿರುವ ಕೆಲವು ಕವಿತೆಗಳಲ್ಲಿ ಧಾಟಿಯೇ ಹಿಡಿತಕ್ಕೆ ಸಿಕ್ಕದೆ, ಇನ್ನು ಕೆಲವು ಕಡೆ ಉದ್ದೀಪಕ ಶಕ್ತಿ ಇಲ್ಲದೆ, ಮತ್ತೆ ಕೆಲವು ಕಡೆ ಪ್ರತಿಮೆಗಳು ಅನ್ಯಸಂಸ್ಕೃತಿಗೆ ಸೇರಿದ ವಿಶಿಷ್ಟತೆಯಿಂದಾಗಿ, ಹಲಕೆಲವು ಅಡ್ಡಿ ಆತಂಕಗಳನ್ನು ನಾವು ಎದುರಿಸಿದರೂ ಕೂಡ, ಶರ್ಮರ ಈ ಸಾಹಸವನ್ನು ನಾವು ಮೆಚ್ಚಿಕೊಳ್ಳುತ್ತೇವೆ.

—ಸುಮತೀಂದ್ರ ನಾಡಿಗ್

# ವಸ್ತುಸಂಗ್ರಹ

## ಬಿ.ಎಂ.ಶ್ರೀ. ಸ್ಮಾರಕ: ಮಾಸ್ತಿಯವರ ಅಪೇಕ್ಷೆ

1947ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದ ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ತಮ್ಮ ಗುರುವರ್ಯರೂ ತಮ್ಮ ಹಿಂದೆ ಪರಿಷತ್ತಿನ ಉಪಾಧ್ಯಕ್ಷರೂ ಆಗಿದ್ದ ಬಿ. ಎಂ. ಶ್ರೀ. ಅವರು ತೀರಿಕೊಂಡು (ಮರಣ: ಜನವರಿ 5, 1946) ಕೆಲಕಾಲ ಆದಮೇಲೆ ಬಿ. ಎಂ. ಶ್ರೀ. ಸ್ಮಾರಕ ಒಂದು ಆಗಬೇಕು ಎಂದು ಪರಿಷತ್ತಿನ 'ಕನ್ನಡ ನುಡಿ'ಯಲ್ಲಿ (ಶುಕ್ರವಾರ, ಜೂನ್ 13, 1947)—

> "ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಪ್ರಮುಖರಾಗಿ, ನಾಯಕರಾಗಿ, ಕನ್ನಡ ನಾಡು ನುಡಿಗೆ ಬಹುಮುಖವಾಗಿ ಸೇವೆಯನ್ನು ಸಲ್ಲಿಸಿ ನಮ್ಮ ಜನರ ಭಕ್ತಿ ಪ್ರೀತಿಗಳನ್ನು ಗಳಿಸಿ ಕಳೆದ ವರ್ಷ ತೀರಿಕೊಂಡ ಶ್ರೀ ಬೆಳ್ಳೂರ ಮೈಲಾರ ಶ್ರೀಕಂಠಯ್ಯನವರ ನೆನಪನ್ನು ಸ್ಥಿರವಾಗಿ ನಿಲ್ಲಿಸುವ ಉದ್ದೇಶದಿಂದ ಏನಾದರೊಂದು ಕಾರ್ಯಕ್ರಮ ಕೈಗೊಳ್ಳಬೇಕೆಂದು ನಾಡ ಹಿರಿಯರ ಯೋಚನೆಯಾಗಿದೆ."

ಎಂದು ತಿಳಿಸಿ, "ಹಿರಿಯರ ಹೆಸರಿನಲ್ಲಿ ಒಂದು ಲಕ್ಷ ರೂಪಾಯಿಗಳಿಗೆ ಕಡಮೆಯಿಲ್ಲದೆ ಒಂದು ನಿಧಿಯನ್ನು ಕೂಡಿಸಬೇಕೆಂದೂ, ಆ ವರ್ಷದ ಸಮ್ಮೇಳನಕ್ಕೆ ಮುಂಚೆಯೇ ನಿಧಿಸಂಗ್ರಹವಾಗಿ, ಹಣದ ಮೊತ್ತ ಗೊತ್ತಾದಮೇಲೆ ಒಂದು ಅಥವಾ ಹಲವು ರೀತಿಯಲ್ಲಿ ಸ್ಮಾರಕವನ್ನು ಸ್ಥಾಪಿಸಬೇಕೆಂದೂ, ಹಣ ಕೂಡಿಕೆಗೆ ಇಡಿಯ ಕನ್ನಡ ನಾಡಿನಲ್ಲಿ ಪ್ರಾದೇಶಿಕ ಸಮಿತಿಗಳು ಏರ್ಪಾಡಾಗಬೇಕೆಂದೂ ತಮ್ಮ ಬಯಕೆಯನ್ನು ಕನ್ನಡ ಜನದ ಮುಂದೆ ಇಟ್ಟರು. (ಮಾಸ್ತಿಯವರ ಲೇಖನದ ಪೂರ್ಣಪಾಠವನ್ನು ಅನುಬಂಧವಾಗಿ ಕೊಟ್ಟಿದೆ.) ಇವರ ಮನವಿಯನ್ನು ನಮ್ಮ ಜನ ಮನಸ್ಸಿಗೆ ತಂದು ಕೊಂಡಂತೆ ಕಾಣಲಿಲ್ಲ.

ಯಾವುದಕ್ಕೂ ಕಾಲ ಕೂಡಿಬರಬೇಕಷ್ಟೆ. ಈ 'ಕಾಲಲಬ್ಧಿ' ಅಥವಾ ಸುಯೋಗ ಮೊದಲ ಬಾರಿಗೆ ಒಮ್ಮೆ 1979ರ ಮೇ 6ರಂದು–'ಶ್ರೀ'ಯವರು ತೀರಿ ಕೊಂಡ ಬಳಿಕ 35 ವರ್ಷಗಳು ಸಂದಮೇಲೆ–ಒದಗಿ ಬಂದು, ಹೇಗೋ ಏನೋ ಯಾರಿಗೋ ಪ್ರೇರಣೆ ಆಗಿ, ಬಹುಶಃ ಮಾಸ್ತಿಯವರ ಬಯಕೆ ಹಣ್ಣಾಗಿ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಸ್ಥಾಪನೆ ಆಯಿತು. ಸಾಹಿತ್ಯಾಭಿಮಾನಿಗಳ ಕೃಪಾಪೋಷಣೆ ಯಿಂದ ಅದು ಬೆಳೆದು, ಉಳಿದು, ಒಂದು ಜೀವಂತ ಸ್ಮಾರಕ ಆಗುವುದೆಂಬ ನಂಬಿಕೆ ನಮ್ಮದು.

## ಬಿ.ಎಂ.ಶ್ರೀ. ಮತ್ತು ಕೈಲಾಸಂ ಜನ್ಮಶತಮಾನೋತ್ಸವಗಳು

1984 ಜನವರಿ 3ಕ್ಕೆ 'ಶ್ರೀ'ಯವರು ಹುಟ್ಟಿ ನೂರು ವರುಷಗಳು ಸಲ್ಲುತ್ತವೆ. 1984ನೆಯ ಇಸವಿಯನ್ನು ಬಿ. ಎಂ. ಶ್ರೀ. ಹಾಗೂ ಕೈಲಾಸಂ ಜನ್ಮಶತಮಾನ ವರ್ಷ ಎಂದು ಪರಿಗಣಿಸಿ, ಕನ್ನಡ ನಾಡು ನುಡಿಗಳಿಗೆ ಅವರಿಬ್ಬರೂ ಸಲ್ಲಿಸಿರುವ ಅಮೋಘ ಸೇವೆಯನ್ನು ನೆನೆಯುವುದು, ಅವರ ಸ್ಮಾರಕವಾಗಿ ಉತ್ಸವ ಆಚರಿಸುವುದು ಕನ್ನಡಿಗರ ಕರ್ತವ್ಯ. ಶ್ರೀಯವರು ಕನ್ನಡ ಕಾವ್ಯದಲ್ಲಿ ಹೇಗೆ ಕ್ರಾಂತಿ ಉಂಟುಮಾಡಿದರೋ ಹಾಗೆ ಕೈಲಾಸಂ ಕನ್ನಡ ನಾಟಕ ಪ್ರಪಂಚದಲ್ಲಿ ಒಂದು ಅದ್ಭುತ ಕ್ರಾಂತಿಯನ್ನು ತಂದರು.

ಬಿ. ಎಂ. ಶ್ರೀ. ಯವರ ಜನ್ಮಶತಮಾನೋತ್ಸವವನ್ನು ಅವರ ಹೆಸರಿನಲ್ಲಿಯೇ ಸ್ಥಾಪಿತವಾಗಿರುವ ಪ್ರತಿಷ್ಠಾನವು ವಿಶಿಷ್ಟ ರೀತಿಯಲ್ಲಿ ಆಚರಿಸಬೇಕಾದದ್ದು ಅದರ ಹೊಣೆಗಾರಿಕೆಯೇ ಆಗಿದೆ. ಇದನ್ನು ಮನಗಂಡು ಪ್ರತಿಷ್ಠಾನದ ಕಾರ್ಯಸಮಿತಿ ಈ ಸಂಬಂಧವಲ್ಲಿ 29-8-1982ರ ಸಭೆಯಲ್ಲಿ ಒಂದು ಉತ್ಸವ ಸಮಿತಿಯನ್ನೂ ಕಾರ್ಯಸಮಿತಿಯನ್ನೂ ನಿಯೋಜಿಸಿತು. ಪ್ರತಿಷ್ಠಾನದ ಪ್ರಾರ್ಥನೆಯಂತೆ ಈ ಸಮಿತಿಗಳ ಕಾರ್ಯಾಧ್ಯಕ್ಷರಾಗಿದ್ದುಕೊಂಡು ಉತ್ಸವದ ಆಚರಣೆಯ ನೇತೃತ್ವವನ್ನು ವಹಿಸಿಕೊಳ್ಳಲು ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರು ಒಪ್ಪಿದ್ದಾರೆ. ಅವರ ನೇತೃತ್ವದಲ್ಲಿ ಉತ್ಸವವು ಯಶಸ್ವಿಯಾಗಿ ನಡೆಯುವುದರಲ್ಲಿ ಸಂದೇಹವಿಲ್ಲ. ಜಿಲ್ಲಾ ಮತ್ತು ತಾಲ್ಲೂಕು ಮಟ್ಟಗಳಲ್ಲಿ ನಡೆಸಬೇಕೆಂದಿರುವ ಹಾಗೂ ಮತ್ತಿತರ ಕೆಲವು ಕಾರ್ಯಕ್ರಮಗಳನ್ನು ನಡೆಸಲು ಪ್ರತಿಷ್ಠಾನದೊಂದಿಗೆ ಸಹಕರಿಸಲು ಕನ್ನಡ ಸಾಹಿತ್ಯ ಪರಿಷತ್ತು ಒಪ್ಪಿಕೊಂಡಿರುವುದು ಅತ್ಯಂತ ಸ್ವಾಗತಾರ್ಹ. ಮಿಥಿಕ್ ಸೊಸೈಟಿ ಮತ್ತು ಇತರ ಪ್ರಮುಖ ಸಂಘ ಸಂಸ್ಥೆಗಳನ್ನು ಸಹಕಾರಕ್ಕಾಗಿ ಕೇಳಿಕೊಳ್ಳಬೇಕೆಂಬ ಉದ್ದೇಶವೂ ಪ್ರತಿಷ್ಠಾನಕ್ಕಿದೆ.

ಪ್ರತ್ಯೇಕವಾಗಿ ಮುದ್ರಿಸಿರುವ, ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರರು 35 ವರ್ಷಗಳ ಹಿಂದೆ ಮಾಡಿಕೊಂಡ ಮನವಿಯನ್ನು ಕನ್ನಡಿಗರು ಮನಸ್ಸಿಗೆ ತಂದುಕೊಂಡು, ಬಿ. ಎಂ. ಶ್ರೀ. ಯವರಿಗೆ ಸೂಕ್ತ ಸ್ಮಾರಕವನ್ನು ನಿರ್ಮಿಸಲು ಪ್ರತಿಷ್ಠಾನಕ್ಕೆ ಉದಾರವಾಗಿ ಧನಸಹಾಯ ಮಾಡಬೇಕೆಂದು ಪ್ರಾರ್ಥಿಸಿಕೊಳ್ಳಲಾಗಿದೆ. 1984ರಲ್ಲಿ ನಡೆಯಬೇಕಾದ ಕೈಲಾಸಂ ಜನ್ಮಶತಮಾನೋತ್ಸವವನ್ನೂ ಕನ್ನಡಿಗರು ಆಚರಿಸಬೇಕಾಗಿದೆ. ವೃತ್ತಿನಾಟಕ ಸಂಘಗಳೂ, ಅಮೆಚೂರು ನಾಟಕ ಸಂಘಗಳೂ ಅವರ ನಾಟಕಗಳನ್ನು ಪ್ರದರ್ಶಿಸುವ ಮೂಲಕ, ನಾಟಕ ವಿಚಾರಗೋಷ್ಠಿಗಳನ್ನು ಏರ್ಪಡಿಸುವ ಮೂಲಕ ಆಚರಿಸಬಹುದು. ಪ್ರತಿಷ್ಠಾನವೂ ಒಂದು ವಿಚಾರಗೋಷ್ಠಿಯನ್ನು ನಡೆಸುವ ಆಲೋಚನೆ ಇಟ್ಟುಕೊಂಡಿದೆ.

**ಅಪೂರ್ವ ಹಸ್ತಪ್ರತಿ**

ಪಂಜೆ ಮಂಗೇಶರಾವ್, ಟಿ. ಎಸ್. ವೆಂಕಣ್ಣಯ್ಯ ಮತ್ತು ಡಿ. ಎಲ್. ನರಸಿಂಹಾಚಾರ್ ಇವರ ನೆರವಿನಿಂದ ಬಿ.ಎಂ.ಶ್ರೀ.ಯವರು ಸಂಗ್ರಹಿಸಿ, ಸಂಪಾದಿಸಿರುವ "ಕುಮಾರವ್ಯಾಸ ಭಾರತದ ಸಂಗ್ರಹ"ದ ಕೈ ಬರಹದ ಸಮಗ್ರ ಹಸ್ತಪ್ರತಿಯನ್ನು ಪ್ರೊ॥ ಎಚ್. ಎಂ. ಶಂಕರನಾರಾಯಣರಾವ್ ಅವರು ಪ್ರತಿಷ್ಠಾನಕ್ಕೆ ದಾನಮಾಡಿದ್ದಾರೆ. ಪ್ರತಿಷ್ಠಾನ ಅವರಿಗೆ ಅತ್ಯಂತ ಕೃತಜ್ಞವಾಗಿದೆ.

ಈ ಸಂಗ್ರಹದಲ್ಲಿ ಒಟ್ಟು 1873 ಪದ್ಯಗಳನ್ನು ಆರಿಸಿಕೊಳ್ಳಲಾಗಿದೆ. (ಆದಿಪರ್ವ 396, ಸಭಾ–204, ಅರಣ್ಯ–202, ವಿರಾಟ–149 ಉದ್ಯೋಗ 189, ಭೀಷ್ಮ–151, ದ್ರೋಣ–172, ಕರ್ಣ–227, ಶಲ್ಯ–15, ಗದಾ–178)

ಈ ಸಂಗ್ರಹ ನಾಲ್ಕು ಹಸ್ತಪ್ರತಿಗಳ ಸಹಾಯದಿಂದ ಸಿದ್ಧಪಡಿಸಿದ್ದಾಗಿದೆ. ಇವರಲ್ಲಿ ಅತ್ಯಂತ ಪ್ರಾಚೀನ ಕೈಬರಹದ ಹಸ್ತಪ್ರತಿ ಎನ್ನಲಾದ ಓರಿಯಂಟಲ್ ಲೈಬ್ರರಿಯ ಪ್ರತಿಯನ್ನು (ಕ್ರಿ. ಶ. 1554) ಆಧಾರ ಪ್ರತಿಯಾಗಿ ಸ್ವೀಕರಿಸಿರುವ ಹಾಗೆ ಕಾಣುತ್ತದೆ. ನಾಲ್ಕೂ ಹಸ್ತಪ್ರತಿಗಳ ಪಾಠಾಂತರಗಳನ್ನು ಪಕ್ಕದಲ್ಲಿ ಕಾಣಿಸಿದೆ. ಈ ಪಾಠಾಂತರಗಳು ಬಹುಶಃ ಡಿ. ಎಲ್. ನರಸಿಂಹಾಚಾರ್ ಅವರ ಹಸ್ತಾಕ್ಷರದಲ್ಲಿದೆ ಎಂದು ಊಹಿಸಲು ಅವಕಾಶವಿದೆ. ಪದ್ಯಗಳ ಆಯ್ಕೆಯನ್ನು (ಕೆಲವು ಕಾಲದವರೆಗೆ ಪಂಜೆಯವರೂ ಈ ಕೆಲಸದಲ್ಲಿ ನೆರವಾಗಿದ್ದರು.) ಟಿ. ಎಸ್. ವೆಂಕಣ್ಣಯ್ಯನವರು ಮಾಡಿದ್ದಾರೆ. ಈ ಕಾರ್ಯದಲ್ಲಿ ಡಿ. ಎಲ್. ಎನ್. ಮತ್ತು ಎ. ಆರ್. ಕೃ. ಅವರ ಸಲಹೆ ಸೂಚನೆಗಳೂ ನೆರವಾಗಿರಬಹುದು. ಆದರೆ ಪಾಠ ಸ್ವೀಕಾರದ ಅಂತ್ಯ ನಿರ್ಣಯ ಬಿ. ಎಂ. ಶ್ರೀ. ಅವರದ್ದು ಎನ್ನುವುದಕ್ಕೆ ಸ್ಪಷ್ಟವಾದ ದಾಖಲೆ ಇದೆ. ಹೀಗಿರುತ್ತ, ಇದೊಂದು ಅತ್ಯಮೂಲ್ಯವಾದ ಸಂಗ್ರಹವಾಗಿ ಪರಿಣಮಿಸಿದೆ ಮತ್ತು ಇಡಿಯಾಗಿ ಪ್ರಕಟನ ಯೋಗ್ಯವಾಗಿದೆ. ಅಪ್ರಕಟಿತವಾದ ಈ ಹಸ್ತಪ್ರತಿಯನ್ನು ಬಿ. ಎಂ. ಶ್ರೀ ಜನ್ಮ ಶತಮಾನೋತ್ಸವದ ವಿಶೇಷ ಪ್ರಕಟನೆಯಾಗಿ ಪ್ರಕಟಿಸಿದರೆ ಬಿ. ಎಂ. ಶ್ರೀಯವರ ನೆನಪಿಗೆ ಇದೊಂದು ಬೆಲೆಬಾಳುವ ಸ್ಮಾರಕವಾಗುತ್ತದೆ. ಕರ್ನಾಟಕ ಸರ್ಕಾರವೂ ಇತರ ಸಂಘಸಂಸ್ಥೆಗಳೂ ಉದಾರಿಗಳಾದ ಮಹನೀಯರೂ ಈ ಮಹತ್ವಪೂರ್ಣವೂ ಮಹಾಜನೋಪಯುಕ್ತವೂ ಆದ ಕಾರ್ಯಕ್ಕೆ ಉದಾರವಾಗಿ ದ್ರವ್ಯಸಹಾಯ ನೀಡಬೇಕೆಂದು ಬೇಡುತ್ತೇವೆ.

---

## ಸಂತಾಪ ಸೂಚನೆ

(18-6-1983ರಂದು ಸಭೆ ಸೇರಿದ್ದ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಕಾರ್ಯಸಮಿತಿ ಅಂಗೀಕರಿಸಿದ ನಿರ್ಣಯ)

ಸುಪ್ರಸಿದ್ಧ ಕಾದಂಬರಿಕಾರರೂ ಆಚಾರ್ಯ ಪಾಠಶಾಲೆಯ ಕನ್ನಡ ವಿಭಾಗದ ಮುಖ್ಯರೂ ಬಿ. ಎಂ. ಶ್ರೀ. ಪ್ರತಿಷ್ಠಾನದ ಮಾನ್ಯ ಸದಸ್ಯರೂ ಆಗಿದ್ದ ಪ್ರೊ|| ಕೊರಟಿ ಶ್ರೀನಿವಾಸರಾಯರು ಈಚೆಗೆ ನಿಧನಹೊಂದಿದ್ದರಿಂದ ಕನ್ನಡ ಸಾಹಿತ್ಯ ಪ್ರಪಂಚಕ್ಕೆ-ಮುಖ್ಯವಾಗಿ ಕನ್ನಡ ಕಾದಂಬರೀ ಪ್ರಪಂಚಕ್ಕೆ-ಬಹಳ ನಷ್ಟವಾಗಿದೆ. ಪ್ರತಿಷ್ಠಾನವು ಒಬ್ಬ ಅಭಿಮಾನಿ ಸದಸ್ಯರನ್ನು ಕಳೆದುಕೊಂಡಿದೆ. ಕರ್ನಾಟಕದ ಇತಿಹಾಸಕ್ಕೆ—ವಿಶೇಷವಾಗಿ ವಿಜಯನಗರ ಸಾಮ್ರಾಜ್ಯಕ್ಕೆ—ಸಂಬಂಧಪಟ್ಟಂತೆ ಅಸಂಖ್ಯಾತ ಕಾದಂಬರಿಗಳನ್ನು ರಚಿಸಿ, ಅವರು ಜನಪ್ರಿಯ ಇತಿಹಾಸ ಕಾದಂಬರಿಕಾರ ಎಂದು ಪ್ರಖ್ಯಾತರಾಗಿದ್ದರು. ಇವರ ಒಂದೆರಡು ಕಾದಂಬರಿಗಳು ಚಲನಚಿತ್ರಗಳಾಗಿ ರೂಪಗೊಂಡು ರಸಿಕ ಜನರ ಮನ್ನಣೆ ಗಳಿಸಿದ್ದುವು. ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಪಟ್ಟ ಕೆಲವು ಕಾದಂಬರಿಗಳು ತೆಲುಗಿಗೂ ಹಿಂದಿಗೂ ಭಾಷಾಂತರ ಗೊಂಡಿದ್ದುವು. ಒಬ್ಬ ಉತ್ತಮ ಅಧ್ಯಾಪಕರಾಗಿ, ಸೌಜನ್ಯಮೂರ್ತಿಯಾಗಿ ಶ್ರೀಯುತರು ವಿದ್ಯಾರ್ಥಿ ಲೋಕಕ್ಕೂ ಮಿತ್ರವೃಂದಕ್ಕೂ ಆತ್ಮೀಯರಾಗಿದ್ದರು. ಇಂಥ ಒಬ್ಬ ಶ್ರೇಷ್ಠ ವ್ಯಕ್ತಿಯ ನಿಧನದಿಂದ ಕನ್ನಡ ಸಾಹಿತ್ಯಲೋಕ ಬಡವಾಗಿದೆ. ದಿವಂಗತರ ಕುಟುಂಬವರ್ಗದ ದುಃಖದಲ್ಲಿ ಕಾರ್ಯಸಮಿತಿಯು ಸದಸ್ಯರು ಭಾಗಿಗಳಾಗಿದ್ದಾರೆ. ಪ್ರತಿಷ್ಠಾನದ ಪರವಾಗಿ ಕಾರ್ಯಸಮಿತಿ ದಿವಂಗತರ ಕುಟುಂಬವರ್ಗಕ್ಕೆ ತನ್ನ ಅನುತಾಪವನ್ನು ಈ ಮೂಲಕ ತಿಳಿಸಬಯಸುತ್ತದೆ.

**ಡಾ|| ಆರ್. ಎಸ್. ಪಂಚಮುಖಿ**

ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯ ನಿರ್ದೇಶಕರಾಗಿದ್ದ ಡಾ|| ಆರ್. ಎಸ್. ಪಂಚಮುಖಿ ಅವರು ಕೆಲವು ಕಾಲದ ಹಿಂದೆ ನಿಧನಹೊಂದಿದರಷ್ಟೆ. ಅವರು ಆ ಸಂಸ್ಥೆಯ ಸ್ಥಾಪಕರಾಗಿದ್ದುದಲ್ಲದೆ, ಅದನ್ನು ಕಟ್ಟಿ ಬೆಳಸಿ ಉಚ್ಚ್ರಾಯಸ್ಥಿತಿಗೆ ತಂದ ಕಾರ್ಯಸಾಹಸಿಗಳು. ಕನ್ನಡ, ಮರಾಠಿ, ಸಂಸ್ಕೃತ, ಇಂಗ್ಲಿಷ್ ಭಾಷೆಗಳಲ್ಲಿ ಉದ್ದಾಮ ಪಂಡಿತರಾಗಿದ್ದ ಅವರು ಅನೇಕ ಶಾಸನಗಳನ್ನು ಸಂಪಾದಿಸಿ ಪ್ರಕಟಿಸಿದವರು. "ಹರಿದಾಸ ಸಾಹಿತ್ಯ" ಎಂಬ ವಿದ್ವತ್‌ಪೂರ್ಣ, ಸಂಶೋಧನಾತ್ಮಕ ಗ್ರಂಥವಲ್ಲದೆ ಆ ವಿಷಯವಾಗಿ ಅನೇಕ ಲೇಖನಗಳನ್ನು ಬರೆದಿರುವರು. ಚಂದ್ರರಾಜನ "ಮದನ ತಿಲಕ"ವನ್ನು ಪ್ರಥಮತಃ ಸಂಪಾದಿಸಿ ಪ್ರಕಟಿಸಿರುವರು. ಪ್ರತಿಷ್ಠಾನದ ಗೌರವಸದಸ್ಯರಾಗಿದ್ದ ಈ ಮಹಾನ್ ವಿದ್ವಾಂಸರು ತೀರಿಕೊಂಡದ್ದರಿಂದ ಕನ್ನಡ ವಿದ್ವತ್‌ಪ್ರಪಂಚಕ್ಕೆ ತುಂಬಲಾಗದ ನಷ್ಟವಾಗಿದೆ.

---

## ತಪ್ಪುಗ್ರಹಿಕೆಗಾಗಿ ವಿಷಾದ

ಕವಿ ದ. ರಾ. ಬೇಂದ್ರೆಯವರು ತೀರಿಕೊಂಡ ತರುಣದಲ್ಲಿ ಪ್ರತಿಷ್ಠಾನದ ವಾರ್ತಾಪತ್ರದ ಪೂರಕ ಪ್ರಕಟನೆಯಾಗಿ "ಬೇಂದ್ರೆ ಸ್ಮೃತಿ" ಎಂಬ ಸಂಸ್ಮರಣ ಗ್ರಂಥವನ್ನು ಪ್ರತಿಷ್ಠಾನ ಹೊರತಂದಿತಷ್ಟೆ. ಇದರಲ್ಲಿ ನಮ್ಮ ನಾಡಿನ ಶ್ರೇಷ್ಠ ಕಲಾವಿದರಾದ ಶ್ರೀ ಆರ್. ಎಸ್. ನಾಯ್ಡು ಅವರು ರಚಿಸಿದ್ದ ಬೇಂದ್ರೆ ಅವರ ಶಿಲ್ಪ ಕೃತಿಯ ಹಾಗೂ ರೇಖಾಚಿತ್ರದ ಪ್ರತಿಚಿತ್ರಗಳನ್ನು ಪ್ರಕಟಿಸಿದ್ದೆವು. ಆ ಸಮಯಕ್ಕೆ ಸ್ವಲ್ಪ ಹಿಂದೆ ಶ್ರೀ ನಾಯ್ಡು ಅವರು ರುಗ್ಣಶಯ್ಯೆಯಲ್ಲಿದ್ದು ಚಿಕಿತ್ಸೆ ಪಡೆಯುತ್ತಿದ್ದರು. ಪ್ರತಿಚಿತ್ರಗಳ ಪ್ರಕಟನೆಯ ಸಂಬಂಧದಲ್ಲಿ ಕಲಾವಿದರ ಹೆಸರನ್ನು ಪ್ರಕಟಿಸುವಲ್ಲಿ ತಪ್ಪುಗ್ರಹಿಕೆಯಿಂದ ಜೀವಂತರಾಗಿರುವವರನ್ನು "ದಿವಂಗತ" ಎಂದು ಉಲ್ಲೇಖಿಸ ಲಾಗಿದೆ. ಈ ಅಕ್ಷಮ್ಯ ಲೇಖನದೋಷ ಕಲಾವಿದರ ನಿಕಟವರ್ತಿಗಳೂ ಅಭಿಮಾನಿ ಗಳೂ ಆದ ಮೈಸೂರಿನ ಶ್ರೀ ಎಂ. ಎಸ್. ರೂಪರಾಜ್ ಎಂಬವರ ಗಮನಕ್ಕೆ ಬಂದು ಈ ಬಗ್ಗೆ ತುಂಬ ನೊಂದುಕೊಂಡು ನಮಗೆ ಪತ್ರ ಬರೆದಿದ್ದಾರೆ. ಈ ಅಕ್ಷಮ್ಯ ಅಪರಾಧ–ಅಪಚಾರ ಶ್ರೀ ನಾಯ್ಡು ಅವರ ವಿಷಯದಲ್ಲಿ ಆದುದಕ್ಕಾಗಿ ಪ್ರತಿಷ್ಠಾನದ ಪರವಾಗಿ ಅವರ ಕ್ಷಮೆ ಕೋರುತ್ತ, ಅವರು ನೂರಾರು ವರ್ಷ ನಮ್ಮೊಡನೆ ಇದ್ದು ತಮ್ಮ ಕಲಾವೈಭವದಿಂದ ಕನ್ನಡ ನಾಡಿಗೆ ಕೀರ್ತಿ ತರಲಿ ಎಂದು ಆಶಿಸುತ್ತೇವೆ.

ಎಂ. ವಿ. ಸೀ.

---

ಅನುಬಂಧ ೧

## ಬಿ.ಎಂ.ಶ್ರೀ. ಸ್ಮಾರಕ

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಪ್ರಮುಖರಾಗಿ, ನಾಯಕರಾಗಿ, ಕನ್ನಡ ನಾಡು ನುಡಿಗೆ ಬಹುಮುಖವಾಗಿ ಸೇವೆಯನ್ನು ಸಲ್ಲಿಸಿ ನಮ್ಮ ಜನರ ಭಕ್ತಿಪ್ರೀತಿಗಳನ್ನು ಗಳಿಸಿ ಕಳೆದ ವರ್ಷ ತೀರಿಕೊಂಡ ಶ್ರೀ ಬೆಳ್ಳೂರ ಮೈಲಾರ ಶ್ರೀಕಂಠಯ್ಯನವರ ನೆನಪನ್ನು ಸ್ಥಿರವಾಗಿ ನಿಲ್ಲಿಸುವ ಉದ್ದೇಶದಿಂದ ಏನಾದರೊಂದು ಕಾರ್ಯಕ್ರಮ ಕೈಗೊಳ್ಳಬೇಕೆಂದು ನಾಡ ಹಿರಿಯರ ಯೋಚನೆಯಾಗಿದೆ.

ಈ ಬಗ್ಗೆ ಈ ಸಲ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಎಲ್ಲ ಪ್ರಾಂತಗಳ ಪ್ರಮುಖರು ನೆರೆದ ವೇಳೆ ಪರಸ್ಪರ ಪರ್ಯಾಲೋಚನೆ ಮಾಡುವುದೆಂದು ಏರ್ಪಾಡಾಗಿದ್ದಿತು.

ಹಲವರು ಮಿತ್ರರ ಸೂಚನೆಯ ಮೇರೆಗೆ ನಾನು ನಮ್ಮ ಈ ಸಭೆಗೆ (1) ಹಿರಿಯರ ಹೆಸರಿನಲ್ಲಿ ಒಂದು ಲಕ್ಷ ರೂಪಾಯಿಗಳಿಗೆ ಕಡಮೆಯಿಲ್ಲದೆ ಒಂದು ನಿಧಿಯನ್ನು ಕೂಡಿಸಬೇಕೆಂದೂ, (2) ಸಾಧ್ಯವಾದರೆ ಈ ಹಣ ಕೂಡಿಸುವ ಕಾರ್ಯ ಮುಂದಿನ ಸಮ್ಮೇಳನಕ್ಕೆ ಮುಂದಾಗಿಯೇ ಮುಗಿಯಬೇಕೆಂದೂ, (3) ಆ ಹಣದ ಮೊತ್ತ ಎಷ್ಟೆಂದು ತಿಳಿದನಂತರ ಯಾವ ಒಂದು ಅಥವಾ ಹಲವು ರೀತಿಯಲ್ಲಿ ಸ್ಮಾರಕ ವನ್ನು ಸ್ಥಾಪಿಸಬೇಕೆಂದು ನಿರ್ಧರಿಸಬಹುದೆಂದೂ, 4) ಹಣವನ್ನು ಶೇಖರಿಸುವ ಬಗ್ಗೆ ಆಯಾ ಪ್ರದೇಶ ಸಮಿತಿಗಳ ಅಧ್ಯಕ್ಷರು, ಕಾರ್ಯದರ್ಶಿಗಳು ಮತ್ತು ಕಾರ್ಯ ಸಮಿತಿಯ ಪ್ರಾದೇಶಿಕ ಸದಸ್ಯರು ಸೇರಿ ಮೂರು ಮೂರು ಮಂದಿಯ, ಹದಿನಾರು ಸಮಿತಿಗಳು ಇರತಕ್ಕದ್ದೆಂದೂ ಸಲಹೆ ಮಾಡಿದೆನು. ಈ ಸಲಹೆಯನ್ನು ಸಭೆ ಒಪ್ಪಿತು.

ಇದರಂತೆ ಈಗ ಸಮಿತಿಗಳು ಏರ್ಪಟ್ಟು ನಿಧಿಯನ್ನು ಶೇಖರಿಸುವ ಕೆಲಸ ಆರಂಭ ಆಗಬೇಕಾಗಿದೆ.

ಪ್ರದೇಶ ಸಮಿತಿಗಳ ಅಧ್ಯಕ್ಷರು ಕಾರ್ಯದರ್ಶಿಗಳು ಕಾರ್ಯಸಮಿತಿಯ ಆಯಾ ಪ್ರದೇಶದ ಸದಸ್ಯರು ಈ ತಿಂಗಳ ಕೊನೆಯೊಳಗಾಗಿ ಒಂದು ಕಡೆ ಕೂಡಿ ತಮ್ಮ ಪ್ರದೇಶದಲ್ಲಿ ಹಣ ಕೂಡಿಸುವ ಬಗ್ಗೆ ತಕ್ಕ ವ್ಯವಸ್ಥೆಯನ್ನು ಮಾಡಿಕೊಳ್ಳ ಬೇಕೆಂದು ನಾನು ಪರಿಷತ್ತಿನ ಪರವಾಗಿ ಈ ಮೂಲಕ ಪ್ರಾರ್ಥಿಸುತ್ತೇನೆ.

ಶ್ರೀಯವರ ನೆನಪಿಗಾಗಿ ಕಾಣಿಕೆಯನ್ನು ಸಲ್ಲಿಸಲು ಅಪೇಕ್ಷಿಸುವವರು ಆ ಬಗೆಯ ಹಣವನ್ನು ಈ ಕೆಲಸಕ್ಕಾಗಿ ತಮ್ಮಲ್ಲಿ ಬರುವ ಕಾರ್ಯಕರ್ತರಿಗೆ, ಅಥವಾ ನೇರವಾಗಿ ಪರಿಷತ್ತಿನ ಕಚೇರಿಗೆ ಕಳುಹಿಸಬಹುದು. ಒಡನೆಯೇ ಹಣ ಮುಟ್ಟಿಸಲು ಬಯಸುವವರು ಅದನ್ನು ಈಗಲೇ ಪರಿಷತ್ತಿನ ಕಚೇರಿಗೆ ಕಳುಹಿಸಬಹುದಾಗಿದೆ. ಹಣ ಹೀಗೆ ಎಷ್ಟು ಶೀಘ್ರದಲ್ಲಿ ಸಂದರೆ ಅಷ್ಟು ಒಳಿತು.

ಹಣ ಕಳಿಸುವಲ್ಲಿ ಅದು ಶ್ರೀಯವರ ಸ್ಮಾರಕನಿಧಿಗೆಂದು ನಿರ್ದಿಷ್ಟವಾಗಿರು ವುದನ್ನು ಸ್ಪಷ್ಟವಾಗಿ ಗುರುತಿಸಿರಬೇಕು.

ಸಂದ ಹಣದ ವಿವರವನ್ನು ಕನ್ನಡ ನುಡಿಯಲ್ಲಿ ವಾರ ವಾರ ಪ್ರಕಟಿಸಲಾಗು ತ್ತದೆ.*

**ಮಾಸ್ತಿ ವೆಂಕಟೇಶ ಅಯ್ಯಂಗಾರ್**
ಉಪಾಧ್ಯಕ್ಷ

---

* ಉದ್ಧೃತಿ: 1947 ಜೂನ್ 13ರ 'ಕನ್ನಡ ನುಡಿ'ಯಲ್ಲಿನ ಲೇಖನ.

ಅನುಬಂಧ ೨

# ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

(ಸಂಕ್ಷಿಪ್ತ ಪರಿಚಯ)

6ನೇ ಮೇ 1979ರಂದು ಸ್ಥಾಪನೆಯಾಗಿ, 10–3–1980ರಂದು ರಾಷ್ಟ್ರಕವಿ ಡಾ|| ಕುವೆಂಪು ಅವರಿಂದ ಉದ್ಘಾಟನೆಯಾದ ಬಿ. ಎಂ. ಶ್ರೀ. ಪ್ರತಿಷ್ಠಾನ ಈ ವರ್ಷ ಮೇ 6ಕ್ಕೆ ನಾಲ್ಕು ವರ್ಷಗಳ ಸಾರ್ಥಕ ಪ್ರಾರಂಭಾವಸ್ಥೆಯನ್ನು ಮುಗಿಸಿ ಮುನ್ನಡೆದಿದೆ.

ಪೋಷಕರಾದ ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್, ಅಧ್ಯಕ್ಷರಾದ ಶ್ರೀ ನಿಟ್ಟೂರು ಶ್ರೀನಿವಾಸರಾವ್ ಇವರ ಮಾರ್ಗದರ್ಶನದಲ್ಲಿ ವಿದ್ವಾಂಸರನ್ನುಳ್ಳ ಕಾರ್ಯ ಸಮಿತಿಯ ಹಾಗೂ ಸಲಹಾಮಂಡಲಿಗಳ ಸಹಕಾರದಿಂದ ಸಂಸ್ಥೆ ತಾನು ನಿರೀಕ್ಷಿಸಿದ್ದ-ಕ್ಕಿಂತ ಹೆಚ್ಚಿನ ಪ್ರಮಾಣದ ಕೆಲಸ ಮಾಡಿದೆ. ಅಖಿಲ ಕರ್ನಾಟಕ ವ್ಯಾಪ್ತಿಯ, ಪ್ರಾತಿನಿಧ್ಯದ ಏಕೈಕ ಗಣ್ಯ ವಿದ್ವತ್ ಸಂಸ್ಥೆಯೆಂದು ಈಗಾಗಲೇ ತಕ್ಕಮಟ್ಟಿಗೆ ಹೆಸರು ಮಾಡಿದೆ. ಸಂಸ್ಥೆಯ ಸದಸ್ಯರೆಲ್ಲರೂ ಪ್ರಸಿದ್ಧ ವಿದ್ವಾಂಸರು ಇಲ್ಲವೆ ಸಾಹಿತಿಗಳು ಆಗಿದ್ದಾರೆ.

ಸಂಸ್ಥೆಯಲ್ಲಿ ಈಗ 48 ಜನ ಆಜೀವ ಸದಸ್ಯರಿದ್ದಾರೆ, 86 ಜನ ಸಾಧಾರಣ ಸದಸ್ಯರಿದ್ದಾರೆ, ಒಂಬತ್ತು ಮಂದಿ ದಾನಿ ಸದಸ್ಯರಿದ್ದಾರೆ.

ದಿವಂಗತರಾದ ಬಿ. ಎಂ. ಶ್ರೀ., ಚಂದ್ರಶೇಖರಶರ್ಮ (ನವ್ಯಕವಿ ರಾಮಚಂದ್ರ ಶರ್ಮರ ತಂದೆ) ಮತ್ತು ಪ್ರಸಿದ್ಧ ವಕೀಲರೂ ಬಹುಕಾಲ ಮಿಥಿಕ್ ಸೊಸೈಟಿಯ ಕಾರ್ಯದರ್ಶಿಗಳೂ ಆಗಿದ್ದ ಎಸ್. ಶ್ರೀಕಂಠಯ್ಯ ಇವರುಗಳ ಹೆಸರಿನಲ್ಲಿ ಪ್ರತಿ ವರ್ಷವೂ ಸ್ಮಾರಕೋಪನ್ಯಾಸಗಳನ್ನು ಏರ್ಪಡಿಸಲು ಅವರ ವಂಶಜರು ದತ್ತಿ ನಿಧಿಗಳನ್ನು ಏರ್ಪಡಿಸಿದ್ದಾರೆ. ಈಗಾಗಲೇ ಡಾ|| ವಿ. ಕೃ. ಗೋಕಾಕ್, ಡಾ|| ಎಸ್. ವಿ. ರಂಗಣ್ಣ, ಪ್ರೊ|| ಎ. ಎನ್. ಮೂರ್ತಿರಾವ್, ಡಾ|| ಎಸ್. ಆರ್. ರಾವ್ ಇವರುಗಳು ಸ್ಮಾರಕೋಪನ್ಯಾಸಗಳನ್ನು ಮಾಡಿರುತ್ತಾರೆ. ಪ್ರತಿ ವರ್ಷ ನಡೆಯುವ ಈ ಉಪ-ನ್ಯಾಸಗಳನ್ನು ಪುಸ್ತಕ ರೂಪದಲ್ಲಿ ಅಚ್ಚು ಹಾಕಿಸುವ ಶಾಶ್ವತ ವ್ಯವಸ್ಥೆ ಆಗ ಬೇಕಾಗಿದೆ.

ಸುಪ್ರಸಿದ್ಧ ಸಂಶೋಧಕ ಡಾ|| ಶಂ. ಬಾ. ಜೋಶಿಯವರ ಹೆಸರಿನಲ್ಲಿ ಸಂಶೋಧನೆ ನಡೆಸಲು ಒಂದು ದತ್ತಿ ನಿಧಿ ಏರ್ಪಟ್ಟಿದೆ.

ಸದಸ್ಯರೊಂದಿಗೆ ಅರ್ಥಪೂರ್ಣ ಸಂಪರ್ಕವನ್ನು ಇಟ್ಟುಕೊಳ್ಳುವ ಸಲುವಾಗಿ ಪ್ರತಿಷ್ಠಾನ ಇದುವರೆಗೆ ಆರು ವಾರ್ತಾಪತ್ರ ಸಂಚಿಕೆಗಳನ್ನು ಪ್ರಕಟಿಸಿದೆ. ಇನ್ನು

ಮುಂದೆ ವಾರ್ತಾಪತ್ರದ ಬದಲಾಗಿ "ಲೋಚನ" ಎಂಬ ವಿದ್ವತ್‌ಪತ್ರಿಕೆಯನ್ನು ಆರು ತಿಂಗಳಿಗೊಮ್ಮೆ ಇದೇ 1983ರ ಜೂನ್ ತಿಂಗಳಿಂದ ಪ್ರಾರಂಭಿಸಲಾಗಿದೆ. ಆಗತ್ಯಕಂಡಂತೆ ಕೆಲವು ಪುಟಗಳನ್ನು ಪ್ರತಿಷ್ಠಾನ ವಾರ್ತೆಗೆ ಮೀಸಲಿಡಲಾಗುವುದು.

1981ರ ಜನವರಿ-ಫೆಬ್ರವರಿ ತಿಂಗಳಿನಲ್ಲಿ ಸಾಹಿತ್ಯ ಅಕಾಡೆಮಿ, ಮೈಸೂರು ವಿಶ್ವವಿದ್ಯಾನಿಲಯ ಮತ್ತು ಮಿಥಿಕ್ ಸೊಸೈಟಿ ಇವುಗಳು ನೀಡಿದ ಧನಸಹಾಯದಿಂದ ಹಸ್ತಪ್ರತಿಶಾಸ್ತ್ರವನ್ನು ಕುರಿತ ವಿಚಾರಗೋಷ್ಠಿ ಕರ್ನಾಟಕದಲ್ಲೇ ಏಕೆ, ಭಾರತದಲ್ಲೇ ಮೊತ್ತಮೊದಲ ಸಲ ಅತ್ಯಂತ ಯಶಸ್ವಿಯಾಗಿ ನಡೆಯಿತು. ಗೋಷ್ಠಿಯಲ್ಲಿ ಮಂಡಿಸ-ಲಾದ ಪ್ರಬಂಧಗಳ ಸಂಕಲನ 'ಹಸ್ತಪ್ರತಿ ಶಾಸ್ತ್ರ'ವನ್ನು ಪ್ರಕಟಿಸಿದೆ.

ಪ್ರತಿಷ್ಠಾನದ ಮೊತ್ತ ಮೊದಲ ಪ್ರಕಟನೆಯಾಗಿ ನಾರಾಯಣದಾಸರ (19ನೇ ಶತಮಾನ) 'ಕೀರ್ತನ ಕುಸುಮಾಂಜಲಿ' ಪ್ರಕಟವಾಗಿದೆ. ಡಾ|| ಫ. ಗು. ಹಳಕಟ್ಟಿ ಜನ್ಮಶತಮಾನೋತ್ಸವದ ನೆನಪಿಗಾಗಿ 1982ರ ಫೆಬ್ರವರಿ 28ರಂದು 'ಮಣಿಹ' ಗ್ರಂಥ ಪ್ರಕಟವಾಯಿತು. ಹಳಕಟ್ಟಿ ಅವರ ಬದುಕು—ಬರಹ, ಹಸ್ತಪ್ರತಿ ಶಾಸ್ತ್ರ, ಗ್ರಂಥಸಂಪಾದನೆ ಇತ್ಯಾದಿ ವಿಷಯಗಳಿಗೆ ಸಂಬಂಧಪಟ್ಟಂತೆ 45 ವೈದುಷ್ಯಪೂರ್ಣ ವಾದ ಲೇಖನಗಳು ಇದರಲ್ಲಿ ಅಡಕವಾಗಿವೆ. ಶಾಸ್ತ್ರವಿಷಯಕ ಲೇಖನಗಳಾದರೂ ಸಾಮಾನ್ಯರಿಗೂ ರುಚಿಸುವಂತಹ ಲೇಖನಗಳು ಹಲವಾರು ಇವೆ.

ವರಕವಿ ಡಾ|| ದ. ರಾ. ಬೇಂದ್ರೆಯವರು ನಿಧನರಾದ ತರುಣದಲ್ಲಿ ಅವರ ನೆನಪಿ ಗಾಗಿ 'ಬೇಂದ್ರೆ ಸ್ಮೃತಿ' ಎಂಬ ಪುಸ್ತಕವನ್ನು ಪ್ರಕಟಿಸಲಾಯಿತು.

ಇನ್ನೊಂದು ಗಮನಾರ್ಹ ವಿಷಯವೆಂದರೆ, ನಮ್ಮ ಮನವಿಯನ್ನು ಮನ್ನಿಸಿ ಕೇಂದ್ರ ಸರ್ಕಾರದ ವಿದ್ಯಾ ಮತ್ತು ಸಂಸ್ಕೃತಿ ಇಲಾಖೆ ಪ್ರಾಚೀನ ಹಸ್ತಪ್ರತಿಗಳನ್ನು ಸಂರಕ್ಷಿಸಿ ಪ್ರಕಟಿಸುವ ಯೋಜನೆಗೆ ಸಂಬಂಧಪಟ್ಟಂತೆ 1981-82ನೆಯ ಸಾಲಿಗಾಗಿ 50,000-00 ರೂ. ವಿಶೇಷ ಅನುದಾನವನ್ನು ನೀಡಿತು. ಈ ಯೋಜನೆಗೆ ಅನುಸಾರವಾಗಿ ಪ್ರಸಕ್ತ ವರ್ಷದಲ್ಲಿ ಆಯ್ದ 'ಸರ್ವಜ್ಞ ವಚನಗಳು', ಅಪ್ರಕಟಿತ "ಸೂತಭಾರತ" ಅಥವಾ "ಸ್ವರ್ಗಾರೋಹಣ" ಎಂಬ 17ನೇ ಶತಮಾನದ ಕೃತಿ, 'ಶ್ರೀ ಕೃಷ್ಣದೇವರಾಯನ ದಿನಚರಿ' ಎಂಬ ಚಾರಿತ್ರಿಕ ಮಹತ್ವದ ಬಖೈರು, ತಿಮ್ಮಪ್ಪದಾಸರ (19ನೆಯ ಶತಮಾನ) 'ಧ್ರುವಚರಿತ್ರೆ' ಇವುಗಳನ್ನು ಪ್ರಕಟಿಸಿದೆ. 'ಹಸ್ತಪ್ರತಿ ಶಾಸ್ತ್ರ'ವೂ ಈ ಯೋಜನೆಯಲ್ಲೇ ಪ್ರಕಟವಾದುದು.

ತಿಮ್ಮಪ್ಪದಾಸರ 'ಶ್ರೀ ಕೃಷ್ಣಬಾಲಲೀಲೆ' (ಪೂರ್ವ ಭಾಗ) ಮತ್ತು 18ನೇ ಶತಮಾನದ ಜಾಯೇಂದ್ರನ 'ರಸಮಂಜರಿ' ಎಂಬ ಅಲಂಕಾರ ಶಾಸ್ತ್ರ ಗ್ರಂಥ ಇವನ್ನು ಪ್ರಕಟನೆಗಾಗಿ ಸಿದ್ಧಗೊಳಿಸಲಾಗುತ್ತಿದೆ. ಕೇಂದ್ರಸರ್ಕಾರವು ಪ್ರಸಕ್ತ ವರ್ಷಕ್ಕೆ ನೀಡಿರುವ ಅನುದಾನದ ನೆರವಿನಿಂದ 'ಶ್ರೀ ಕೃಷ್ಣಬಾಲಲೀಲೆ'ಯನ್ನು ಈ ವರ್ಷ ಪ್ರಕಟಿಸಲಾಗುವುದು.

ಪ್ರತಿಷ್ಠಾನದ ಹಸ್ತಪ್ರತಿಗಳ ಭಂಡಾರದಲ್ಲಿ ಸುಮಾರು 200 ಕನ್ನಡ, ಸಂಸ್ಕೃತ ಮತ್ತು ತೆಲುಗು ಭಾಷೆಯ ಕೃತಿಗಳ ಹಸ್ತಪ್ರತಿಗಳಿವೆ. ಇವುಗಳ ಪೈಕಿ ಸುಮಾರು 100 ಕನ್ನಡ ಹಸ್ತಪ್ರತಿಗಳ ಸೂಚಿಯನ್ನು ಕೇಂದ್ರ ಸರ್ಕಾರವು 1982–83ನೆಯ ಸಾಲಿಗಾಗಿ ನೀಡಿರುವ ಅನುದಾನದ ನೆರವಿನಿಂದ ಸಿದ್ಧಪಡಿಸುವ ಕಾರ್ಯ ಮುಗಿದಿದೆ. ಅದನ್ನು ಈಗ ಅಚ್ಚು ಮಾಡಿಸಬೇಕಾಗಿದೆ. ಇದಕ್ಕೆ ಕರ್ನಾಟಕ ಸರ್ಕಾರ ವಿಶೇಷ ಧನಸಹಾಯ ನೀಡಬೇಕೆಂದು ಪ್ರಾರ್ಥಿಸುತ್ತೇವೆ. ಕೇಂದ್ರ ಸರ್ಕಾರದ ನೆರವನ್ನು ಕೃತಜ್ಞತೆಯಿಂದ ನೆನೆಯುತ್ತೇವೆ.

ಶ್ರೀಯವರು ಪ್ರಾಚೀನ ಕನ್ನಡ ಸಾಹಿತ್ಯದ ಪ್ರಕಟನೆ-ಪ್ರಚಾರ ಹಾಗೂ ಆಧುನಿಕ ಸಾಹಿತ್ಯದ ಸರ್ವಾಂಗೀಣ ಅಭಿವೃದ್ಧಿ—ಇವೆರಡಕ್ಕೂ ಶ್ರಮಿಸಿದವರು. ಪ್ರತಿಷ್ಠಾನ ನಡೆಸುವ 'ಸಹೃದಯ ಗೋಷ್ಠಿ' ಸಮಕಾಲೀನ ಸಾಹಿತ್ಯದ ವಿಚಾರ ವಿಮರ್ಶೆಗೆ, ಕೃತಿಗಳ ವಾಚನಕ್ಕೆ ಗಮನ ಹರಿಸುತ್ತದೆ. ಯುವಪೀಳಿಗೆಯ ಸಾಹಿತಿಗಳೂ ವಿದ್ವಾಂಸರೂ ಸಹೃದಯ ಗೋಷ್ಠಿಯ ಸದಸ್ಯರಾಗಿ ಅದನ್ನು ಮುನ್ನಡಸಬೇಕೆಂದು ವಿನಂತಿಸುತ್ತೇವೆ.

ಈಗಾಗಲೇ ಪ್ರಕಟವಾಗಿರುವ ಗ್ರಂಥ ಪ್ರತಿಗಳನ್ನೂ ಮುದ್ರಿತ ಗ್ರಂಥಗಳ ಮತ್ತು ಹಸ್ತಪ್ರತಿಗಳ ಭಂಡಾರವನ್ನೂ ಮುಂದೆ ಪ್ರಕಟವಾಗಲಿರುವ ಗ್ರಂಥಗಳನ್ನೂ ಇಡುವುದಕ್ಕೆ ಈಗಿನ ಕಾರ್ಯಾಲಯದ ಕೋಣೆಗಳು ಏನೇನೂ ಸಾಲವು. ಸ್ವಂತ ಕಟ್ಟಡವನ್ನು ಹೊಂದುವವರೆಗೆ ಒಂದು ಬಾಡಿಗೆ ಮನೆಯನ್ನಾದರೂ ಗೊತ್ತುಮಾಡಿಕೊಳ್ಳಬೇಕಾಗಿದೆ. ಈಗ ಇಬ್ಬರು ಒಪ್ಪೊತ್ತಿನ ಕೆಲಸಗಾರರು ಸಹಾಯ ಮಾಡುತ್ತಿದ್ದಾರೆ. ಅವರಿಗೆ ಕೊಡುವ ಸಂಭಾವನೆ ಅಲ್ಪ. ಪೂರ್ತಿ ಕಾಲದ ಸಿಬ್ಬಂದಿಯ ನೇಮಕ ತುರ್ತಾಗಿ ಅಗತ್ಯವಾಗಿದೆ. ಇದಕ್ಕೆಲ್ಲಾ ರಾಜ್ಯ ಸರ್ಕಾರದ ಧಾರಾಳವಾದ ಅನುದಾನವನ್ನು ಅತ್ಯಗತ್ಯವಾಗಿ ಪಡೆಯಬೇಕಾಗಿದೆ. ರಾಜ್ಯ ಸರ್ಕಾರವು ಪ್ರತಿಷ್ಠಾನಕ್ಕೆ ವಾರ್ಷಿಕ ಅನುದಾನವನ್ನು ನೀಡುವ ಕೃಪೆ ಮಾಡಬೇಕು.

1984ರ ಜನವರಿ 3ನೆಯ ದಿನಾಂಕವು ಬಿ.ಎಂ.ಶ್ರೀ. ಯವರ ಜನ್ಮದಿನ. 1984ನೆಯ ಇಸವಿಯನ್ನು "ಬಿ.ಎಂ.ಶ್ರೀ. ಜನ್ಮಶತಮಾನ ವರ್ಷ" ಎಂದು ಘೋಷಿಸಿ ಸಮಸ್ತ ಕರ್ನಾಟಕವೂ 'ಶ್ರೀ' ಶತಮಾನೋತ್ಸವವನ್ನು ಅರ್ಥಪೂರ್ಣವಾಗಿ ಆಚರಿಸಬೇಕೆಂದು ಬಿ.ಎಂ.ಶ್ರೀ. ಪ್ರತಿಷ್ಠಾನ ಅಪೇಕ್ಷೆಪಡುತ್ತದೆ. ಬಿ.ಎಂ.ಶ್ರೀ. ಪ್ರತಿಷ್ಠಾನವೂ ಇತರ ಸಂಘ ಸಂಸ್ಥೆಗಳ ಸಹಯೋಗದಿಂದ ಉತ್ಸವವನ್ನು ಅಖಿಲ ಕರ್ನಾಟಕದ ಮಟ್ಟದಲ್ಲಿ ಆಚರಿಸಬೇಕೆಂದು ತೀರ್ಮಾನಿಸಿ, ಉತ್ಸವ ಕಾರ್ಯಸಮಿತಿಯನ್ನು ನಿಯೋಜಿಸಿದೆ. ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ರಾಮಕೃಷ್ಣ ಹೆಗಡೆ ಅವರು ಉತ್ಸವ ಸಮಿತಿಯ ಮಹಾಪೋಷಕರಾಗಿರಲು ದಯವಿಟ್ಟು ಸಮ್ಮತಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾದ

ಶ್ರೀ ಜಿ. ನಾರಾಯಣರು ಕಾರ್ಯಾಧ್ಯಕ್ಷರಾಗಿ ಸಹಕರಿಸುತ್ತಿದ್ದಾರೆ. ಉತ್ಸವದ ವೆಚ್ಚಕ್ಕೆ ಎರಡು ಲಕ್ಷ ರೂಪಾಯಿಗಳ ಸಹಾಯದ್ರವ್ಯವನ್ನು ಕೊಡಬೇಕೆಂದು ರಾಜ್ಯ ಸರ್ಕಾರವನ್ನು ಕೇಳಿಕೊಂಡಿದೆ. ಇದಲ್ಲದೆ, ಶತಮಾನೋತ್ಸವ ಸಂದರ್ಭದಲ್ಲಿ 'ಶ್ರೀ' ಯವರ ಸ್ಮರಣಾರ್ಥ ನಿರ್ಮಿಸಬೇಕೆಂದಿರುವ ಭವನ ನಿರ್ಮಾಣಕ್ಕೆ 10 ಲಕ್ಷ ರೂಪಾಯಿಗಳನ್ನು ನೀಡಬೇಕೆಂದು ರಾಜ್ಯ ಸರ್ಕಾರವನ್ನು ಕೇಳಿಕೊಳ್ಳಲಾಗಿದೆ. ಇಷ್ಟರ ಜೊತೆಗೆ ನಾವೂ ಹಣವನ್ನು ಕೂಡಿಸುವುದು ಅಗತ್ಯವಾಗುತ್ತದೆ. ಕಟ್ಟಡಕ್ಕೆ ಅಗತ್ಯವಾದ ನಿವೇಶನವನ್ನು ನಗರಾಭಿವೃದ್ಧಿ ಪ್ರಾಧಿಕಾರ ಇಲ್ಲವೆ ನಗರಸಭೆ ನೀಡ ಬೇಕಾಗಿದೆ; ನೀಡುವುವೆಂದು ಭರವಸೆ ಹೊಂದಿದ್ದೇವೆ.

ಎಲ್ಲ ಕನ್ನಡಿಗರೂ ಧನಸಹಾಯ ಮಾಡುವ ಮೂಲಕವೂ ಇತರ ಬಗೆ ಗಳಲ್ಲಿಯೂ ಬಿ.ಎಂ.ಶ್ರೀ. ಜನ್ಮಶತಮಾನೋತ್ಸವದ ಆಚರಣೆಯಲ್ಲಿ ಪ್ರತಿಷ್ಠಾನ ದೊಂದಿಗೆ ಸಹಕರಿಸಬೇಕೆಂದು ವಿನಂತಿಸುತ್ತೇವೆ.

**ಎಂ. ವಿ. ಸೀತಾರಾಮಯ್ಯ**
ಸಂಸ್ಥಾಪಕ ಕಾರ್ಯದರ್ಶಿ,
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

**ನಿಟ್ಟೂರು ಶ್ರೀನಿವಾಸ ರಾವ್**
ಅಧ್ಯಕ್ಷ,
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ



ಪ್ರತಿಯೊಂದು ಮಗುವೂ ಹುಟ್ಟುತ್ತಲೆ–ವಿಶ್ವಮಾನವ. ಬೆಳೆಯುತ್ತಾ ನಾವು ಅದನ್ನು 'ಅಲ್ಪಮಾನವ'ನನ್ನಾಗಿ ಮಾಡುತ್ತೇವೆ. ಮತ್ತೆ ಅದನ್ನು 'ವಿಶ್ವಮಾನವ' ನನ್ನಾಗಿ ಮಾಡುವುದೆ ವಿದ್ಯೆಯ ಕರ್ತವ್ಯವಾಗಬೇಕು.

o o o

"ಮನುಷ್ಯಜಾತಿ ತಾನೊಂದೆ ವಲಂ" ಎಂಬುದನ್ನು ನಿರುಪಾಧಿಕವಾಗಿ ಸ್ವೀಕರಿಸಬೇಕು.

o o o

ದೇಶ ನನ್ನದು, ನನ್ನದು ನಾಡು
ಎನ್ನದ ಮಾನವನೆದೆ ಸುಡುಗಾಡು.

—ಡಾ॥ ಕುವೆಂಪು.

ಅನುಬಂಧ ೩

## ಪ್ರತಿಷ್ಠಾನ ವಾರ್ತೆ

# ಬಿ. ಎಂ. ಶ್ರೀ. ಜನ್ಮಶತಮಾನೋತ್ಸವ

### ಈವರೆಗೆ ಧನಸಹಾಯ ಮಾಡಿರುವ ಮಹನೀಯರು

| ಸರ್ವಶ್ರೀ— | | ರೂ. | ಪೈ. |
|---|---|---|---|
| 1. | ವೀರೇಂದ್ರ ಹೆಗಡೆ, ಧರ್ಮಸ್ಥಳ. | 1001 | 00 |
| 2. | ಎಸ್. ಡಿ. ಎಸ್. ರಾವ್, ಪುಣೆ. | 1000 | 00 |
| 3. | ಟಿ. ಎಸ್. ರಾಜಗೋಪಾಲ ಅಯ್ಯಂಗಾರ್, ಮೈಸೂರು. | 250 | 00 |
| 4. | ಪ್ರೊ|| ಚಿದಂಬರ ದೀಕ್ಷಿತ್, ಮುಂಬಯಿ. | 105 | 00 |
| 5. | ಎ. ಆರ್. ಬದರಿನಾರಾಯಣ್, ಬೆಂಗಳೂರು. | 101 | 00 |
| 6. | ಒಬ್ಬರು ಅಭಿಮಾನಿಗಳು. | 101 | 00 |
| 7. | ಪ್ರೊ|| ಎಂ. ವಿ. ಸೀತಾರಾಮಯ್ಯ, ಬೆಂಗಳೂರು. | 100 | 00 |
| 8. | ಪ್ರೊ|| ಎ. ಎನ್. ಮೂರ್ತಿರಾವ್. ಮೈಸೂರು. | 100 | 00 |
| 9. | ಸೇಡಿಯಾಪು ಕೃಷ್ಣಭಟ್ಟ, ಮಣಿಪಾಲ. | 100 | 00 |
| 10. | ಜಿ. ಎಸ್. ವೆಂಕಟರಾಜು, ಬೆಂಗಳೂರು. | 100 | 00 |
| 11. | ಪ್ರೊ|| ಎಲ್. ಎಸ್. ಶೇಷಗಿರಿರಾವ್, ಬೆಂಗಳೂರು. | 50 | 00 |
| 12. | ಪ್ರೊ|| ಎಚ್. ಎಂ. ಶಂಕರನಾರಾಯಣರಾವ್, ಮೈಸೂರು. | 26 | 00 |
| 13. | ಡಾ|| ಜಿ. ಎಸ್. ದೀಕ್ಷಿತ್, ಧಾರವಾಡ. | 20 | 00 |
| 14. | ಡಾ|| ರಂ. ಶ್ರೀ. ಮುಗಳಿ, ಬೆಂಗಳೂರು. | 10 | 00 |
| 15. | ಎಚ್. ದೇವೀರಪ್ಪ, ಬೆಂಗಳೂರು. | 10 | 00 |
| | ಒಟ್ಟು ರೂ. | 3074 | 00 |

(ಮುಂದುವರಿಸಲಾಗುವುದು)

### ವಿನಂತಿ

ಪ್ರತಿಷ್ಠಾನದ ಸದಸ್ಯರೂ ಅಭಿಮಾನಿಗಳೂ ಉದಾರವಾಗಿ ಉತ್ಸವ ನಿಧಿಗೆ ಧನಸಹಾಯ ಮಾಡಬೇಕೆಂದು ಪ್ರಾರ್ಥನೆ.

**ಎಂ. ವಿ. ಸೀತಾರಾಮಯ್ಯ,**

**ಉತ್ಸವ ಸಮಿತಿಯ ಪರವಾಗಿ.**

**ಅಧಿಕಾರ ವಿಕೇಂದ್ರೀಕರಣ:** ಪುರಸಭೆ, ನಗರಸಭೆಗಳ ಚುನಾವಣೆಗೆ ನಿರ್ಧಾರ; ಹದಿನೆಂಟು ವರ್ಷ ತುಂಬಿದವರಿಗೆಲ್ಲ ಮತಾಧಿಕಾರ. ಮಹಿಳೆಯರಿಗೆ ಸೂಕ್ತ ಪ್ರಾತಿನಿಧ್ಯ.

**ಲೋಕಾಯುಕ್ತ:** ಸಾರ್ವಜನಿಕ ಶೀಲವೃದ್ಧಿ ಸಾಧ್ಯವಾಗುವ ಲೋಕಾ-ಯುಕ್ತ ರಚನೆ ಒಂದು ಮಹತ್ವದ ಕ್ರಮ. ಭ್ರಷ್ಟಾಚಾರದ ಆಪಾದನೆಗೆ ಒಳಗಾದ ಅಧಿಕಾರಿ, ರಾಜಕಾರಿಣಿ ಈ ಸುಗ್ರೀವಾಜ್ಞೆಗೆ ಬದ್ಧ.

**ಹಿಂದುಳಿದ ವರ್ಗಗಳ ಆಯೋಗ:** ಹಿಂದುಳಿದ ವರ್ಗಗಳ ಹಿತರಕ್ಷಣೆಗೆ ನೇಮಕವಾದ ದ್ವಿತೀಯ ಹಿಂದುಳಿದ ವರ್ಗಗಳ ಆಯೋಗ ಹಾಗೂ ಅಲ್ಪಸಂಖ್ಯಾತರ ಸಮಸ್ಯೆ ಪರಿಶೀಲನೆಗೆ ರಚಿತವಾಗಿರುವ ಅಲ್ಪಸಂಖ್ಯಾತರ ಆಯೋಗಗಳ ಕಾರ್ಯಾರಂಭ. ಇವರಿಂದ ದುರ್ಬಲ ವರ್ಗದ ರಕ್ಷಣೆ. ಹರಿಜನ ಗಿರಿಜನ ಅಭಿವೃದ್ಧಿ ಮಂಡಳಿಗೆ 12 ಕೋಟಿ ರೂ. ನೀಡಿಕೆ.

**ಶಿಕ್ಷಣ:** ಶಿಕ್ಷಣ ಕ್ಷೇತ್ರದ ಸಮಗ್ರ ಸುಧಾರಣೆಗೆ ಸಾಧ್ಯವಾಗುವ ಶಿಕ್ಷಣ ವಿಧೇಯಕಕ್ಕೆ ಸಿದ್ಧತೆ. ರಾಜ್ಯದ ವಿದ್ಯಾರ್ಥಿಗಳಿಗೆ ನಿಗದಿಪಡಿಸಿದ ಮೆಡಿಕಲ್ ಸೀಟುಗಳಿಗೆ ಸೀಟು ಶುಲ್ಕ ರದ್ದು. ಸರ್ಕಾರಿ ಸೇವೆಯಲ್ಲಿರುವ ಸ್ಥಳೀಯ ಹಾಗೂ ಸ್ವೈಪೆಂಡರಿ ಪದವೀಧರರು ಹಾಗೂ ಇತರ ಅಭ್ಯರ್ಥಿಗಳಿಗೆ ಸರ್ಕಾರೀ ಸೇವೆಗೆ ಸೇರಲು ಗರಿಷ್ಠ ವಯೋಮಿತಿ ಏರಿಕೆ. ಡಿಗ್ರಿ ಹಾಗೂ ಸ್ನಾತಕೋತ್ತರ ಪದವಿಗಳಲ್ಲಿ ಅತ್ಯುತ್ತಮ ಅಂಕ ಪಡೆದ ಹರಿಜನ–ಗಿರಿಜನ ವಿದ್ಯಾರ್ಥಿಗಳಿಗೆ ಸರ್ಕಾರಿ ಅಧಿಕಾರಿಗಳಾಗಿ ನೇರ ನೇಮಕದ ಅವಕಾಶ. ಹೊಸ ಇಂಗ್ಲಿಷ್ ಶಾಲೆಗಳ ಮಂಜೂರಾತಿ ರದ್ದು.

**ಆಡಳಿತದಲ್ಲಿ ಕನ್ನಡ:** ಆಡಳಿತದಲ್ಲಿ ಕನ್ನಡ ಬಳಕೆ ಕಡ್ಡಾಯ. ಕನ್ನಡ ಬಳಕೆ ಆಗುತ್ತಿದೆಯೇ ಎಂಬುದನ್ನು ಪರಿಶೀಲಿಸಿ, ಸಮಸ್ಯೆಗಳಿದ್ದರೆ ಸಲಹೆ ಸೂಚಿಸಲು ಕಾವಲು ಸಮಿತಿ.

ಅರಣ್ಯ ಅಭಿವೃದ್ಧಿ ; ಮನೆಯಿಲ್ಲದವರಿಗೆ ಮನೆ, ನಿವೇಶನ; ಇಲಾಖಾ ಸಲಹಾ ಸಮಿತಿಗಳ ನೇಮಕ. ಹೀಗೆ ಜನಹಿತಕ್ಕಾಗಿ ಕೈಗೊಂಡಿರುವ ಕ್ರಮಗಳು ಹಲವಾರು. ಸಾಧನೆಗೆ ಕ್ರಮಬದ್ಧವಾಗಿ ಕಾರ್ಯನಿರತ. ಪ್ರಥಮ ವರ್ಷದ ಪ್ರಥಮಾರ್ಧದಲ್ಲಿ ಆಶಾದಾಯಕ ಮುನ್ನಡೆ.

ಮಹಾಜನತೆಗೆ ನೀಡಿರುವ ಆಶ್ವಾಸನೆಗಳನ್ನು ಈಡೇರಿಸಲು ಪಣತೊಟ್ಟಿದೆ ಕರ್ನಾಟಕ ಸರ್ಕಾರ.

**ಪ್ರಕಟನೆ:** ವಾರ್ತಾ ಮತ್ತು ಪ್ರಚಾರ ಇಲಾಖೆ, ಕರ್ನಾಟಕ ಸರ್ಕಾರ, ಬೆಂಗಳೂರು

---

ಮುದ್ರಣ: ಶ್ರೀ ಲಕ್ಷ್ಮಿ ಪ್ರಿಂಟರ್ಸ್, ತ್ಯಾಗರಾಜನಗರ, ಬೆಂಗಳೂರು–28.

## ಜನಹಿತ ಸಾಧನೆಯಲ್ಲಿ
## ಅರ್ಥಪೂರ್ಣ ಕಾರ್ಯಗಳ ಆರು ತಿಂಗಳು

ಕಳೆದ ನೂರೆಂಬತ್ತು ದಿನಗಳಲ್ಲಿ ಸರ್ಕಾರ ಇಟ್ಟ ಹೆಜ್ಜೆ ದಿಟ್ಟ; ತಳೆದ ನಿಲವು ಅಚಲ. ಕೈಗೊಂಡ ಕಾರ್ಯವನ್ನು ಆಗುಮಾಡುವ ವಿಶ್ವಾಸ.

* ಯೋಜನಾ ವೆಚ್ಚದಲ್ಲಿ ಈ ವರ್ಷ ನೂರು ಕೋಟಿ ರೂ. ಹೆಚ್ಚಳ.
* ಅಭಾವ ಪರಿಹಾರ ಕಾರ್ಯಗಳಿಗೆ ಈವರೆಗೆ 50 ಕೋಟಿ ರೂ. ವೆಚ್ಚ.
* ರೈತರು ಹಾಗೂ ಗ್ರಾಹಕರಿಗೆ ನೀಡಿರುವ ರಿಯಾಯಿತಿ—ಸುಮಾರು 50 ಕೋಟಿ ರೂ.

**ಕುಡಿಯಲು ನೀರು; ಕೃಷಿಗೆ ನೀರಾವರಿ :**

ಕುಡಿಯುವ ನೀರಿನ ತೀವ್ರ ಅಭಾವವಿರುವ ಗ್ರಾಮಾಂತರ ಪ್ರದೇಶದಲ್ಲಿ 25 ಕೋಟಿ ರೂ. ವೆಚ್ಚದಲ್ಲಿ 12,800 ಕೊಳವೆ ಬಾವಿಗಳ ಸೌಕರ್ಯ. ಪಟ್ಟಣ ಪ್ರದೇಶದಲ್ಲಿ 1.19 ಕೋಟಿ ರೂ. ವೆಚ್ಚದಲ್ಲಿ 550 ಕೊಳವೆ ಬಾವಿಗಳ ಸೌಲಭ್ಯ. ಎಲ್ಲ ಹಳ್ಳಿಗಳಿಗೂ ನೀರು ಪೂರೈಕೆಗಾಗಿ 100 ಕೋಟಿ ರೂ. ಯೋಜನೆ.

ಹಳೆ ನೀರಾವರಿ ಯೋಜನೆಗಳಿಗೆ ವಿಶೇಷ ಗಮನ. ದೊಡ್ಡ ಮತ್ತು ಮಧ್ಯಮ ನೀರಾವರಿಗೆ 89 ಕೋಟಿ ರೂ. ಕಾವೇರೀ ನದೀ ಕಣಿವೆ ಯೋಜನೆಗೆ 84 ಕೋಟಿ ರೂ. 80,000 ಎಕರೆಗೆ ಅಧಿಕ ನೀರಾವರಿ. 15 ಕೋಟಿ ರೂ. ವೆಚ್ಚದಲ್ಲಿ 400 ಹೊಸ ಕೆರೆಗಳ ನಿರ್ಮಾಣ.

**ರೈತರಿಗೆ ರಿಯಾಯಿತಿ :** ರೈತರಿಗೆ ಸುಮಾರು 36 ಕೋಟಿ ರೂಪಾಯಿಗಳಷ್ಟು ವಿವಿಧ ರೀತಿಯ ಪರಿಹಾರಗಳು.

**ಅಭಾವ ಪರಿಹಾರ ಕಾರ್ಯ :**

ತೀವ್ರ ಅಭಾವಪೀಡಿತ ಪ್ರದೇಶಗಳ ಸಮಸ್ಯೆ ಪರಿಹಾರಕ್ಕೆ ಆದ್ಯತೆ. 50 ಕೋಟಿ ರೂ. ವೆಚ್ಚ. ಕೃಷಿ ಕಾರ್ಮಿಕರು, ರಸ್ತೆ ಮುಂತಾದ ಕಾಮಗಾರಿ ಕೆಲಸಗಾರರ ಕೂಲಿ ದರದಲ್ಲಿ ರೂ. 5ರಿಂದ 6–50ಕ್ಕೆ ಹೆಚ್ಚಳ. ಅಭಾವ ಪರಿಹಾರಕಾರ್ಯ ಪರಿಶೀಲನೆಗೆ ಪ್ರತಿ ಜಿಲ್ಲೆಗೆ ಒಬ್ಬೊಬ್ಬ ಸಚಿವರ ನೇಮಕ.

**ಕೈಗಾರಿಕೆ :** ಶೀಘ್ರದಲ್ಲೇ ಹೊಸ ಕೈಗಾರಿಕೆ ನೀತಿಯ ಪ್ರಕಟನೆ. ಗ್ರಾಮೀಣ ಕೈಗಾರಿಕೆಗಳಿಗೆ ಆದ್ಯತೆ. ತಿಂಗಳಿಗೆ ಒಂದು ಸಾವಿರದಂತೆ ಸಣ್ಣ ಕೈಗಾರಿಕಾ ಘಟಕಗಳ ಸ್ಥಾಪನೆಯ ಗುರಿ.

(ಹಿಂಬದಿಯಲ್ಲಿ ಮುಂದುವರಿದಿದೆ)